# ತುಂಬಿದ ಕೊಡ

ಮತ್ತು ಇತರ ಕಥೆಗಳು.

ಡಾ|| ದೊಡ್ಡೇರಿ ವೆಂಕಟಗಿರಿರಾವ್.

ಸಾಧನ ಪ್ರಕಟನಾಲಯ,
ಸಾಗರ - ಶಿವಮೊಗ್ಗ.

ಜೂನ್ ೧೯೪೬.

ಒಂದು ರೂಪಾಯಿ.

ಮಾರಾಟದ ಅಧಿಕಾರಿಗಳು :

ಸತ್ಯಶೋಧನ ಪುಸ್ತಕಭಂಡಾರ,

ಕೋಟೆ, ಬೆಂಗಳೂರು ನಗರ



ಮುದ್ರಣಕಾರರು:

ತುಮಕೂರು ಎಲೆಕ್ಟ್ರಿಕ್ ಪ್ರೆಸ್,

ಚಿಕ್ಕಪೇಟೆ - - - ತುಮಕೂರು.

೧೯೪೬.

# ಮುನ್ನುಡಿ.

ಕನ್ನಡ ಸಣ್ಣ ಕಥೆಗಳ ಸ್ವರ್ಣಯುಗ (೧೯೨೦-೩೩) ಮುಗಿದ ಮೇಲೆ ಅದು ಸಾಮಾನ್ಯ ಸ್ಥಾನದಲ್ಲಿ – ಸ್ಥಿತಿಯಲ್ಲಿ ನಿಂತುಬಿಟ್ಟಿತು. ಈ ಸಾಮಾನ್ಯ ಸ್ಥಿತಿಯಲ್ಲಿಯೂ ಸುಮಾರು ಐದು ವರ್ಷಕಾಲ ಕಾಳರಾತ್ರಿಯಲ್ಲಿ ಮಿಂಚುಹುಳು ಸುಳಿದಂತೆ ಒಂದೊಂದು ಒಳ್ಳೆಯ ಸಂಗ್ರಹ ಒಂದೊಂದು ಒಳ್ಳೆಯ ಕಥೆ ಬಂದವು. ಆದರೆ ೧೯೩೫ ರಿಂದ ಈವರೆಗೆ ಸಣ್ಣ ಕಥೆಗಳ ಇತಿಹಾಸ ಶೋಚನೀಯ ಸ್ಥಿತಿಯಲ್ಲಿದೆ. ಪರಿಸ್ಥಿತಿಯನ್ನು ಬದಲಾಯಿಸಿ, ಸಣ್ಣ ಕಥೆ ಕನ್ನಡ ಸಾಹಿತ್ಯದಿಂದ ಅಳಸಿಹೋಗದಿರುವಂತೆ ಪ್ರಗತಿಶೀಲ ಲೇಖಕರು ೧೯೪೨ ರಿಂದ ಪ್ರಯತ್ನಿಸುತ್ತಿದ್ದಾರೆ. ೧೯೪೨ ರಿಂದ ಈ ವರೆಗೆ ಪ್ರಕಟವಾಗಿರುವ ಕೃತಿಗಳೆಲ್ಲದರಲ್ಲಿಯೂ "ಕಲಾಪರಿಣತಮತಿ" ಯನ್ನು ಕಾಣಲಾಗದಿದ್ದರೂ ಸಾಧನಪ್ರಿಯತೆ ನೂತನಮಾರ್ಗ ಆವಿಷ್ಕಾರಗಳನ್ನು ಖಂಡಿತ ಕಾಣಬಹುದು. ನಾಲ್ಕು ವರ್ಷದ ಪ್ರಯತ್ನವನ್ನು ಪ್ರಗತಿಶೀಲ ಸಾಹಿತ್ಯದ ಅರುಣೋದಯಕಾಲವೆಂದು ಪರಿಗ್ರಹಿಸಬಹುದು. ಈ ಅವಧಿಯಲ್ಲಿ ನಡೆದ ಪ್ರಾಚೀನ ನೂತನಗಳ ಹೋರಾಟದಲ್ಲಿ ಕಲೆ ಸ್ವಲ್ಪ ಹಿಂದುಳಿಯಬೇಕಾಯಿತು.

ನವೋದಯ ಕಾಲದ (೧೯೨೦-೩೩) ಸಾಹಿತ್ಯ ಇಂದಿನ ಅಭಿರುಚಿಗೆ ಹೊರತಾಗಿದೆ. ಆ ಪರಂಪರೆಯನ್ನು ಅನುಸರಿಸಿ ಬರೆಯುವ ಲೇಖಕರು ಓದುಗರಿಗೆ ಅಪ್ರಿಯರಾಗಿದ್ದಾರೆ. ಯುದ್ಧ, ಸಾರ್ವತ್ರಿಕ ಶಿಕ್ಷಣ, ವೃತ್ತಪತ್ರಿಕೆಗಳ ಬೆಳವಣಿಗೆಗಳ ಪ್ರಭಾವದಿಂದ ಜನತೆಯ ಅಭಿರುಚಿ ವ್ಯತ್ಯಸ್ತವಾಗಿದೆ. ಲೇಖಕ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ತನ್ನ ಅಭಿಪ್ರಾಯಗಳನ್ನು ಕಲಾಕೃತಿಗಳಲ್ಲಿ ಮಂಡಿಸಬಹುದು; ಮಂಡಿಸದೆಯೂ ಇರಬಹುದು. ಅದು ಮುಖ್ಯವಲ್ಲ. ಲೇಖಕನ ದೃಷ್ಟಿಯೆಂತಹದು, ಅವನ ಸಂಪರ್ಕ,

ಆವನ ವಿಶ್ವಾಸ, ಅವನ ಗುರಿ ಎತ್ತ ಸಾಗಿದೆ ಎಂಬುದರ ಕಡೆಗೆ ಓದುಗರ ಲಕ್ಷ್ಯ ಬಿದ್ದಿದೆ. ಊಹೆಗಿಂತ ಭಾವನೆಗೆ, ಸೃಷ್ಟಿಗಿಂತ ಸ್ಥಿತಿಗೆ, ಆಧ್ಯಾತ್ಮವಾದಕ್ಕಿಂತ ಸಾಹಜಿಕ ಜೀವನಕ್ಕೆ ಹೆಚ್ಚು ಬೆಲೆ ಬಂದಿದೆ. ಸಾಹಿತ್ಯಕ್ಕಿಂತಲೂ ಪ್ರಬಲವಾದ ಅಜೇಯ ಶಕ್ತಿ ಇಂತಹ ಯುಗವೊಂದನ್ನು ನಿರ್ಮಿಸಿರುವಾಗ ಸಾಹಿತ್ಯ ಅದನ್ನನುವರ್ತಿಸದೆ ಗತ್ಯಂತರವಿಲ್ಲ.

ಪ್ರಗತಿಶೀಲ ಯುಗದಲ್ಲಿ ನಿರ್ವಿಣ್ಣತೆಗೆ ಮನಸ್ಸು ಮಾರದೆ ಕಲಾದೀಪ್ತಿಯನ್ನು ಬೆಳಗಿಸಿಕೊಂಡು ಬಂದಿರುವ ತರುಣಲೇಖಕರಲ್ಲಿ ಡಾಕ್ಟರ್ ದೊಡ್ಡೇರಿ ವೆಂಕಟಗಿರಿರಾಯರೊಬ್ಬರು. ವೃತ್ತಿಯಲ್ಲಿ ವೈದ್ಯರು. ಪ್ರವೃತ್ತಿಯಲ್ಲಿ ಕಲಾವಿದರು. ಇವರ ವೈದ್ಯಜ್ಞಾನ, ಅನುಭವ ಸಾಹಿತ್ಯದ ಎರಕದಲ್ಲಿ ಬಿದ್ದು ಸುಂದರ ಶಿಲ್ಪಗಳನ್ನು ನಾಡಿಗಿತ್ತಿವೆ. ಪ್ರಸವ ವಿಜ್ಞಾನ – ವಿಕೃತ ಕಾಮ – ಸಂತಾನ ಸಂಯಮ – ವಿದ್ಯಾಭ್ಯಾಸ ಮತ್ತು ಲೈಂಗಿಕ ಶಿಕ್ಷಣ ಮೊದಲಾದ ಶಾಸ್ತ್ರಗ್ರಂಥಗಳನ್ನು ಕನ್ನಡದಲ್ಲಿ ಬರೆದು ವೈಜ್ಞಾನಿಕ ಮನೋವೃತ್ತಿಯನ್ನು ಕನ್ನಡಿಗರಲ್ಲಿ ಹುಟ್ಟಿಸಲು ಯತ್ನಿಸಿದ್ದಾರೆ. ಮಕ್ಕಳ ಸಾಹಿತ್ಯಕ್ಕೆ ರಾಯರ ಸೇವೆ ಅಪಾರ. ಹಾಡು ಹೊಳೆಯನ್ನು ಹರಿಸಿ ನಾಡ ಮಕ್ಕಳನ್ನು ಕುಣಿಸಿ ತಣಿಸಿದ್ದಾರೆ. "ರೋಹಿಣಿ" ಕಾವ್ಯ ಸಂಗ್ರಹದಮೂಲಕ ದೊಡ್ಡವರನ್ನು ತಣಿಸಲೆತ್ನಿಸಿದ್ದಾರೆ. ಅವಿಶ್ರಾಂತ ವೈದ್ಯಕೀಯ ಜೀವನದಲ್ಲಿಯೂ ರಾಯರು ಸಾಹಿತ್ಯೋಪಾಸನೆಗಾಗಿ ವೇಳೆಯನ್ನು ಮೀಸಲಿಟ್ಟು ಕನ್ನಡಿಗರ ವಿಶ್ವಾಸ ಗೌರವಗಳನ್ನು ದೊರಕಿಸಿಕೊಂಡಿರುವರು.

ರಾಯರು ತಾವು ಆಗಾಗ ಬರೆದ ಸಣ್ಣ ಕಥೆಗಳಲ್ಲಿ ಹದಿನಾಲ್ಕನ್ನು ಆರಿಸಿ ಇದೀಗ "ತುಂಬಿದ ಕೊಡ" ಎಂಬ ಹೆಸರಿನಲ್ಲಿ ಪ್ರಕಟಿಸುತ್ತಿದ್ದಾರೆ. ಕಥೆಗಳಲ್ಲಿ ಹೆಚ್ಚುಭಾಗ ಜೀವನದ ಸೂಕ್ಷ್ಮ ಘಟನೆಗಳನ್ನು ಕುರಿತುವಾಗಿವೆ. ಹೆಂಡತಿಯ ಮುನಿಸನ್ನು ಗಂಡ ಹೋಗಲಾಡಿಸಿದ ಬಗೆ (ಅವಳ ಮನಸ್ಸು), ಗಂಡನ ಕೋಪವನ್ನು ಹೆಂಡತಿ ಹೋಗಲಾಡಿಸಿದ ರೀತಿ (ತುಂಬಿದ ಕೊಡ), ವಿಧವೆಯ ಬಾಳು

(ಸರಸಿಯ ಸೌಭಾಗ್ಯ), ಉಗ್ರಪ್ರಣಯಕ್ಕೆ ದೊರೆತ ಶಾಂತಿ (ಶಾಂತಿ) ಮೊದಲಾದ ರಸ ವಿಷಯಗಳನ್ನು ಲೇಖಕರು ಆರಿಸಿಕೊಂಡಿದ್ದಾರೆ.

ಸಂಗ್ರಹದಲ್ಲಿರುವ ಹದಿನಾಲ್ಕು ಕಥೆಗಳೂ ಒಂದೇ ಮಟ್ಟದವಲ್ಲ. ಅವುಗಳಲ್ಲಿ ತುಂಬಿದ ಕೊಡ, ಅವಳ ಮನಸ್ಸು, ನಟಿ, ಸಮಸ್ಯೆ ಅತ್ಯುತ್ತಮ ಕೃತಿಗಳು. ಈ ನಾಲ್ಕು ಕಥೆಗಳಲ್ಲಿನ ಕಲೆಯ ಮಾಟ, ಮುಕ್ತಾಯದ ಸೌಂದರ್ಯ, ಭಾಷೆಯ ಬೆಡಗು, ರಸತೀಕ್ಷ್ಣತೆ ಯಾವ ಕಥೆಗಾರನಿಗೆ ಬೇಕಾದರೂ ಕೀರ್ತಿ ತರುತ್ತವೆ. ರಾಯರು ಈ ಕಥೆಗಳಿಂದ ಓದುಗರಲ್ಲಿ ಹೆಚ್ಚಿನ ಆಸೆ ಆಸಕ್ತಿಗಳನ್ನು ಹುಟ್ಟಿಸುತ್ತಾರೆ. ಹಳದಿ ಅಂಗಿ, ಸರಸಿಯ ಸೌಭಾಗ್ಯ, ಆಕಾಶವಾಣಿ, ಸೋಮಪ್ಪನ ಸಂಪಾದನೆ ಕಥಾವಸ್ತುಗಳು ಈಗಾಗಲೇ ಕೆಲವು ಕತೆಗಳಲ್ಲಿ ತಲೆ ದೋರಿವೆ. ಪರಿಚಯವಸ್ತುವಿಗೆ ಎಂತಹ ಅಂಗಿ ತೊಡಸಿದರೂ ಅದು ಕಲಾಕೃತಿಯಾಗುವುದಿಲ್ಲ. ಉಳಿದ ಕಥೆಗಳಲ್ಲಿ ನಿರೂಪಣಾ ವೈಶಿಷ್ಟ್ಯ ಅಷ್ಟು ಕಾಣಬರದಿದ್ದರೂ ಅವು ನೀರಸವಾಗಿಲ್ಲ. ರಾಯರ ಎಲ್ಲಾ ಕಥೆಗಳನ್ನೂ ಓದುಗರು ಒಮ್ಮೆಯಾದರೂ ಓದ ಬಹುದು. ಓದಿ ಸುಖಪಡಬಹುದು.

ಸಣ್ಣ ಕಥೆಗೆ ಯಥೋಚಿತವಾದ ಸರಳ ಸಹಜ ಶೈಲಿ ರಾಯರ ಕರತಲಾಮಲಕ. ಒಂದೆರಡು ಕಥೆಗಳಲ್ಲಿ ಹವ್ಯಕ ಬ್ರಾಹ್ಮಣರ ಮನೆಮಾತಿನ ಶೈಲಿಯನ್ನು ಉಪಯೋಗಿಸಿದ್ದಾರೆ. ಇದೇ ಶೈಲಿಯಲ್ಲಿ ರಾಯರು ಕೆಲವು ಪೂರ್ಣ ಕಥೆಗಳನ್ನೇ ಬರೆಯಬೇಕು.

"ತುಂಬಿದ ಕೊಡ" ಸಂಗ್ರಹವನ್ನು ನಾನು ಕೆಲವುಸಲ ಓದಿ ಆನಂದಿಸಿದ್ದೇನೆ. ಇಂತಹ ಉತ್ತಮ ಕಥೆಗಳನ್ನು ಬರೆದಿರುವ ಡಾ॥ ವೆಂಕಟಗಿರಿರಾಯರನ್ನು ಅಭಿನಂದಿಸುವುದಲ್ಲದೆ, ಅವರು ಹೆಚ್ಚು ಹೆಚ್ಚು ಕಥೆಗಳನ್ನು ಬರೆದು ಕನ್ನಡ ರಸಿಕರ ಮನದಣಿಸಬೇಕೆಂದು ಸೂಚಿಸುತ್ತೇನೆ.

"ಅನ್ನಪೂರ್ಣ" ವಿಶ್ವೇಶ್ವರಪುರಂ,
ಬೆಂಗಳೂರು ನಗರ, ೯-೬-೧೯೪೬.

**ಅ. ನ. ಕೃಷ್ಣರಾಯ.**

# ಕಥೆಗಳು.

# ಡಾ|| ದೊಡ್ಡೇರಿ ವೆಂಕಟಗಿರಿರಾಯರ ಕೃತಿಗಳು.

---

೧. ಪ್ರಸವ ವಿಜ್ಞಾನ (ಶಾಸ್ತ್ರೀಯ ಗ್ರಂಥ)
೨. ವಿಕೃತ ಕಾಮ ( ,, )
೩. ಸಂತಾನ ಸಂಯಮ ( ,, )
೪. ವಿದ್ಯಾಭ್ಯಾಸ ಮತ್ತು ಲೈಂಗಿಕ ಶಿಕ್ಷಣ (ಪ್ರಬಂಧ)
೫. ರೋಹಿಣಿ (ಕವನಮಾಲೆ)
೬. ತುಂಬಿದ ಕೊಡ (ಸಣ್ಣ ಕಥೆಗಳು)
೭. ಕಂದನ ಹಾಡುಗಳು (ಶಿಶು ಸಾಹಿತ್ಯ, ಸಂಗ್ರಹ)
೮. ಕರಿಗಡುಬು ( ,, ,, )
೯. ದೊಡ್ಡಯ್ಯನ ದಾಳಿ ( ,, ,, )
೧೦. ದಾಳಿಂಬೆ ಚೆಲುವೆ ( ,, ,, )

## ಅಚ್ಚಾಗಲಿರುವುವು.

೧. ಮೇಹರೋಗಗಳು (ಸಚಿತ್ರ ಶಾಸ್ತ್ರೀಯ ಗ್ರಂಥ)
೨. ಶಿಶು ಸಂರಕ್ಷಣ ( ,, ,, )
೩. ಸ್ನಾನ ( ,, ,, )
೪. ಯೌವನದ ಹಾರಿಯಲ್ಲಿ ( ,, ,, )
೫. ಋತುಗಾನ (ಕವನ ಸಂಗ್ರಹ)
೬. ಯಾತ್ರಿಕ (ಕಾದಂಬರಿ)

ಪ್ರಕಾಶಕರು:

ಸಾಧನ ಪ್ರಕಟನಾಲಯ, ಸಾಗರ-ಶಿವಮೊಗ್ಗ

---

# ತುಂಬಿದ ಕೊಡ

ಎರಡು ಗಂಟೆಯಾಗಿತ್ತು. ಬೆಳಿಗ್ಗೆ ಎದ್ದೊಡನೆಯೇ ಹಳ್ಳಿಯ ಕಡೆಗೆ ಕಾಹಿಲೆಯುವರನ್ನು ನೋಡಲು ಹೋಗಿದ್ದ ಗಿರಿಯು ಆಗತಾನೆ ಮನೆಗೆ ಹಿಂತಿರುಗಿದ್ದನು. ಆ ಉರಿಬಿಸಿಲಿನಲ್ಲಿ ಸೈಕಲ್ ಹೊಡೆದು ಸಾಕಾಗಿ ಹೋಗಿತ್ತು. ಹೋಗಲಪ್ಪ, ಹೋದ ಕೆಲಸದ ಪ್ರತಿಫಲವಾಗಿ ಸಾಕಷ್ಟು ಫೀಜು ಸಿಕ್ಕಿದೆಯೇ? ಅದೂ ಇಲ್ಲ.

"ಅಲ್ಲಿ, ನಿಮ್ಮಲ್ಲಿಗೆ ಬಂದಾಗ ಕೊಡುತ್ತೇವೆ" ಎಂದು ಹೇಳಿದವರೇ ಎಲ್ಲರೂ! ಅಲ್ಲದೆ, ಹೊಟ್ಟೆಯಲ್ಲೋ ದೊಂಬರಾಟ ನಡೆದಿತ್ತು! ಮನೆಗೆ ಬಂದವನೇ,—"ಇದೇನು ಇವತ್ತು ತುಂಬಾ ಹೊತ್ತಾಯಿತಲ್ಲಾ" ಅಂತ ಹೆಂಡತಿ ಕೇಳಿದ ಪ್ರಶ್ನೆಗೆ ಉತ್ತರ ಹೇಳುವಷ್ಟು ಸಹನೆ ಸಹ ಇರಲಿಲ್ಲ—ಹ್ಯಾಟ್ ತೆಗೆದು ಮಂಚದಮೇಲೆ ಬಿರ್ರನೆ ಬಿಸಾಕಿದ; ಕೋಟ್ ಬಿಚ್ಚುವುದರಲ್ಲಿದ್ದ.

"ಸ್ವಾಮಿ, ಸ್ವಾಮಿ. . . ." ಅಷ್ಟರಲ್ಲಿ ಹೊರಗೆ ಯಾರೋ ಕೂಗಿದರು.

"Damn that fellow! ಇವರಿಗೆ ಹೊತ್ತು ಗೊತ್ತು ಏನೂ ಇಲ್ಲ ಅಂತ ತೋರುತ್ತೆ", ಎಂದು ಗೊಣಗುತ್ತಾ ಹೊರಕ್ಕೆ ಬಂದನು.

"ಸ್ವಾಮಿ ...."

"ಏನೋ ಅದು. ಆಮೇಲೆ ಬಾರೊ."

"ಬೆಳಗಿನಿಂದ ನಾಲ್ಕು ಸಾರಿ ಬಂದು ಹೋಗಿದೇನೆ ಸ್ವಾಮಿ."

"ಯಾರಿಗೆ ಏನಾಗಿದೆಯೋ, ಏನು ಬೇಕೋ"—ಸ್ವಲ್ಪ ಸಿಡುಕಿನಿಂದಲೇ ಈ ಪ್ರಶ್ನೆಯನ್ನು ಕೇಳಿದ.

"ಅಲ್ಲ ಸ್ವಾಮಿ, ಔಷಧಕ್ಕಲ್ಲ ನಾ ಬಂದಿದ್ದು. ಅಮ್ಮಾವ್ರು ಕೊಡ ಕೊಟ್ಟಿದ್ರು ಸರಿಮಾಡಲಿಕ್ಕೆ. ತುಂಬಾ ನೆಗ್ಗಿ ಹೋಗಿತ್ತು. ಸರಿಮಾಡಿ ತಂದು ಕೊಟ್ಟೆ. ಆದರ ಕೂಲಿ . . . ."

"ಹಾಗೋ. ಆಮೇಲೆ ಷಾಪಿಗೆ ಬಾರೊ. ಈಗ ಚಿಲ್ಲರೆ ಇಲ್ಲ"—ಎನ್ನುತ್ತಾ ಒಳಗೆ ಹೋಗಲನುವಾದನು.

"ಮೂರು ನಾಲ್ಕು ಸಲ ಬಂದೆ ಸ್ವಾಮಿ, ಇವತ್ತು ಸಂಜೆಗೆ ನಾನೆಲ್ಲೊ ಹಳ್ಳಿಗೆ ಹೋಗಬೇಕಾಗಿದೆ. ಚಿಲ್ಲರೆ ತರುತೇನೆ, ಸ್ವಾಮಿ"

ಎಂತಹ ಧನವಂತನೇ ಆಗಲಿ, ಅವನ ಜೀವಮಾನದಲ್ಲಿ ಇಂತಹ ಸಮಯ ಬಂದೇ ಬರುತ್ತೆ ಎಂದು ನನ್ನ ಅಭಿಪ್ರಾಯ. ಅಂದರೆ ಕೈಯಲ್ಲಿ ಒಂದು ಬಿಡಿಗಾಸೂ ಇಲ್ಲದಿರುವಾಗಲೆ, ಕೇಳುವವರು ಬರುವುದು! ಈ ಅನುಭವ ಬೇರೆಬೇರೆ ಅಂತಸ್ತಿನವರಿಗೆ ಬೇರೆಬೇರೆ ತರಹೆ ಇರಬಹುದು. ಗಿರಿ ಇದಕ್ಕೆ ಹೊರತವನಾದವನೇನೂ ಅಲ್ಲ. ಆದಿನ ಅವನಲ್ಲಿ ಬಿಡಿಗಾಸೂ ಇರಲಿಲ್ಲ. ಹಾಗೆಂತ ಅವನನ್ನು ನಿಧಾನವಾಗಿ ಮಾತನಾಡಿಸಿ ಸಮಜಾಯಿಷಿ ಹೇಳಿ ಆಮೇಲೆ ಬರಲು ಹೇಳುವಷ್ಟು ತಾಳ್ಮೆ ಆ ಮುಹೂರ್ತದಲ್ಲಿ ಇರಲೂ ಇಲ್ಲ. ಅಲ್ಲದೆ 'Dignity' ಒಂದಿದೆಯಲ್ಲ! ಹಾಳಾದ್ದು ಸ್ವಾಭಿಮಾನ.

"ಈಗಿಲ್ಲ ಚಿಲ್ಲರೆ. ಷಾಪಿಗೆ ಬಾ ಅಂತ ಹೇಳಿದೆನಲ್ಲೊ"

"ಸ್ವಾಮಿ, ನಾನು ಹಳ್ಳಿಗೆ ಹೋಗಬೇಕು . . . ."

"ಹಾಗಾದರೆ ನಾಳೆ ಬಾ. ಹೋಗು. ಈಗಿಲ್ಲ"

"ಏನು ಸ್ವಾಮಿ, ನಿಮ್ಮಂತವರೇ ಹೀಗಂದರೆ, ನಮ್ಮಂತವರ ಗತಿ ಏನು? ಆದೂ ನೂರಾರು ರೂಪಾಯಿ ಅಲ್ಲ ಸ್ವಾಮಿ, ಹತ್ತಾಣೆ ಮಾತ್ರ"

ಈ ಮಾತು ಈಟಿಯಂತೆ ಇರಿಯಿತು, ಗಿರಿಯ ಎದೆಯನ್ನು. ಇದ್ದದ್ದೂ ರೇಗಿಹೋಯಿತು; ಮನಸ್ಸು ಸಿಟ್ಟಿನ ಹಿಡಿತದಲ್ಲಿ ಸಿಕ್ಕಿತು. ವಿವೇಚನೆ ದೂರವಾಯಿತು.

"ಕೊಡ ಸರಿಮಾಡಿಕೊಂಡು ಬರಲಿಕ್ಕೆ ನಾನು ಹೇಳಿದ್ದೆ ನೇನೋ ನಿನಗೆ? ಮನೇಲಿ ಯಜಮಾನರಿಲ್ಲದಾಗ ಬರೋದು ಗಿಲೀಟ್ ಮಾಡಿ ಬದ್ಮಾಷ್ ಕೆಲಸ ಮಾಡೋದು. ಹೋಗೋ. ಹೋಗೋ"

"ಏನ್ಸ್ವಾಮಿ, ದೊಡ್ಡೋರು ಇಂತಹ ಮಾತನಾಡಬಹುದೆ? ಅಮ್ಮಾವ್ರು ಕೊಟ್ಟರೇನು, ನೀವು ಕೊಟ್ಟರೇನು, ಎಲ್ಲಾ ಒಂದೇ ಅಲ್ಲವೇ? ಬದ್ಮಾಷ್ ಕೆಲಸ ಸಾನೇನು ಮಾಡಿದೇನೆ. ಕೊಡ ಸರಿಮಾಡಿ ವಾಪಸು ತಂದು ಕೊಟ್ಟಿಲ್ವೇ?" ಅಂತ ಅವನು ಮತ್ತೆ ರಾಗ ಎಳೆದನು.

ಗಿರಿಯು ಒಳಕ್ಕೆ ಬಿರ್ರನೆ ಹೋಗಿ, ಕೋಟು ಹ್ಯಾಟು ಹಾಕಿಕೊಂಡು, ತಲೆಬಾಗಿಲಬಳಿ ಬೆದರಿದ ಹರಿಣಿಯಂತೆ ನಿಂತಿದ್ದ ಹೆಂಡತಿಯ ಕಡೆ ಒಂದು ಬಿರುಸಾದ ನೋಟವನ್ನು ಬೀರಿ, "ಮನೇಲಿದ್ದ ಒಂದು ಕೊಡ ಸಾಲದಾಗಿತ್ತೇನೋ? ಇಲ್ಲದಿದ್ದ ಯಜಮಾನಿಕೆ ಮಾಡೋದು, ಪ್ರಾಣತಿನ್ನೋದು!" ಎಂದವನೇ ಹೊರಗೆ ದಾಟಿ 'ಬಾರೋ' ಎಂದು ಅವನಿಗೆ ಹೇಳಿ ಹೊರಟನು. ಹೊರಡುವಾಗ ಇದನ್ನೆಲ್ಲ ಎದುರುಮನೆಯ ಹೆಂಗಸರು ಕಿಟಕಿಯಿಂದ ನೋಡುತ್ತಿದ್ದುದನ್ನು ಕಂಡು ಮುಂಗವಾಯಿತು ಮನಸ್ಸು!

೨

ಸರಿ; ಹೋದ. ಪೇಟೆಯಲ್ಲಿ ಎಲ್ಲೋ ಯಾರ ಹತ್ತಿರವೋ ಕೇಳಿ ಅವನಿಗೆ ಹತ್ತಾಣೆ ಬಿಸಾಕಿ ಕಳುಹಿಸಿದ. ಬೆಳಗಿನಿಂದ ಷಾಪಿಗೆ ಹೋಗಿರಲಿಲ್ಲ. ಎಷ್ಟು ಜನ ಕಾದಿರುತ್ತಾರೋ ಎಂಬ ಯೋಚನೆ ಬೇರೆ. ಹಾಗೆಯೇ ದಾರಿಯಲ್ಲಿ ಹೋಟಲೊಂದರಲ್ಲಿ ಕಾಫಿ ಕುಡಿದು ಷಾಪಿಗೆ ಹೋದ. ತುಂಬ ಜನ ಕಾದಿದ್ದರು. ಅವರನ್ನೆಲ್ಲಾ ವಿಚಾರಿಸಿದ; ಔಷಧ ಕೊಟ್ಟ; ಅವರ ಅವಶ್ಯಕತೆಯನ್ನು ಪೂರೈಸಿದ. ಅಲ್ಲೇ ಅಕ್ಕಪಕ್ಕದಲ್ಲಿ ಎರಡುಮೂರು ರೋಗಿಗಳ ಮನೆಗೆ 'ವಿಸಿಟ್'

ಕೊಟ್ಟ. ಆರುಗಂಟೆಯಾಯಿತು. ವಾಕಿಂಗ್ ಹೋಗುವ ಇವನ ಸ್ನೇಹಿತರ ಕಂಪೆನಿ ಸೇರತೊಡಗಿತು.

"Are you unwell?" ಎಂತ ಒಬ್ಬ ಕೇಳಿದ.

"No, No, No". ಎಂದ.

"ಏನೋ ವಿಪರೀತ ಕೆಲಸ ಇತ್ತು ಅಂತ ಕಾಣುತ್ತೆ" ಎಂದರು ಇನ್ನೊಬ್ಬರು.

"ಜೇಬು ಭರ್ತಿಯಾಯಿತು ಅಂತ ಕಾಣುತ್ತೆ" ಅಂತ ಎಂದರು ಇನ್ನೊಬ್ಬರು.

ಎಲ್ಲರೂ ಹೊರಟರು ಗಾಂಧೀ ಮೈದಾನದ ಕಡೆಗೆ. ಅಲ್ಲಿ ಕುಳಿತು ಹರಟೆ ಹೊಡೆದು ಏಳುವಾಗ ಏಳು ಗಂಟೆ ಆಯಿತು. ಗಿರಿಗೆ ಅವರೆಲ್ಲಾ ಆಡುವ ಮಾತುಗಳು ಕೇಳುತ್ತಿದ್ದುವು; ಮನಸ್ಸು ಮಾತ್ರ ಮಧ್ಯಾಹ್ನ ಆದ ಘಟನೆಯಿಂದ ಕುಂದಿಹೋಗಿತ್ತು; ಆವಾಗ ಈವಾಗ ತಾನೂ ಒಂದೊಂದು ಮಾತು ಸೇರಿಸುತ್ತಿದ್ದ, ಯೋಚನೆ ಇಲ್ಲದೆ.

ಸಿನಿಮ ಕಂಪೆನಿಯ ಪೈಕಿ ಒಬ್ಬರು ಇವರೆಲ್ಲರಿಗೂ ಬೇಕಾದವರೆ. ಅವರೂ ಬಂದರು. "ಇವತ್ತು ಛೆಂಜು ಕಣ್ರಿ. ಎಲ್ರೂ ಬನ್ನಿ. ಇಂಟರ್‌ವಲ್ಲಿಗೆ ಬೇಕಾದರೆ ಹೊರಟರೆ ಸರಿ" ಎಂದು ಸೂಚನೆ ಕೊಟ್ಟರು. ಒತ್ತಾಯ ಮಾಡಿದರು, ಎಲ್ಲರೂ ಬರಲೇಬೇಕೆಂದು. ಸಿನಿಮಾಕ್ಕೆ ಹೋಗಿ, ಗಿರಿ ಮನೆಗೆ ಬಂದಾಗ ರಾತ್ರಿ ೧೦ ಘಂಟೆ.

ಹೆಂಡತಿ ಕಾಯುತ್ತಿದ್ದಳು. ಅವನ ಸ್ವಭಾವವನ್ನು ಚೆನ್ನಾಗಿ ಅರಿತ ಅವಳು ಏನೊಂದೂ ಮಾತನಾಡದೆ, ಮೌನವಾಗಿ, ಅವನು ಕೋಟು ಬಿಚ್ಚುವಾಗ ತಾನು ಅವನ ಬೂಟ್ಸಿನ ಲೇಸ್ ಬಿಚ್ಚಿದಳು. ಅವನು ಪಂಚೆ ಉಡುವುದರೊಳಗಾಗಿ ಕಾಲು ತೊಳೆಯಲು ನೀರು ತಂದು ಕೊಟ್ಟಳು. ಅವನು ಕೈಕಾಲು ತೊಳೆಯುವುದರೊಳಗೆ,

ಎಲೆಹಾಕಿ ಊಟಕ್ಕೆ ಅಣಿಮಾಡಿದಳು. ಅವನೂ ಪಿಟ್ಟೆನ್ನದೆ ಗಬಗಬ ತಿಂದು ಹೋದ! ಹೋದವನೇ ಮುಸುಗೆಳೆದು ಮಲಗಿಬಿಟ್ಟ! ದೈಹಿಕ ಮತ್ತು ಮಾನಸಿಕ ಆಯಾಸದಿಂದಲೋ ಏನೋ ನಿದ್ದೆ ಬರುತ್ತಿತ್ತು. ಎಷ್ಟು ಹೊತ್ತಾಗಿದೆಯೋ ಏನೋ, ಕಾಲಿಗೆ ಏನೋ ಭಾರವಾದಂತಾಗಿ ಎಚ್ಚರವಾಯಿತು. ನೋಡುತ್ತಾನೆ, ಹೆಂಡತಿ. ಇವನ ಕಾಲಮೇಲೆ ತಲೆ ಇಟ್ಟುಕೊಂಡು ಬಿಕ್ಕಿಬಿಕ್ಕಿ ಅಳುತ್ತಿದ್ದಾಳೆ.

"ಏನೇ ಅದು?"

"ದಯವಿಟ್ಟು ಇದೊಂದು ಸಲ ಕ್ಷಮಿಸಿ . . . ಇನ್ನುಮೇಲೆ . . . ಇನ್ನುಮೇ . . . ನಿಮ್ಮನ್ನು ಕೇಳದೆ . . . ಏನೂ ಮಾಡೊಲ್ಲ" ಅಳುತ್ತ ಎಂದಳು.

"ಹಂ . . . ."

"ಇನ್ನೊಂದು ಕೊಡ ಇದೆಯಲ್ಲಾ, ಅದು ತುಂಬಾ ದೊಡ್ಡ ಕೊಡ. ಭಾವಿಯಿಂದ ನೀರೆಳೆಯಲು ತುಂಬಾ ಕಷ್ಟವಾಗುತ್ತೆ. ಮೊದಲಾಗಿದ್ದರೆ ಹೇಗೋ ಎತ್ತುತ್ತಿದ್ದೆ. ಇದು ಸಣ್ಣ ಕೊಡ. ಸರಿಮಾಡಿಸಿಕೊಂಡರೆ ಅನುಕೂಲ ಅಂತ ಕೊಟ್ಟೆ" ಎಂದು ಬಿಕ್ಕುತ್ತ ಬಿಡಿಬಿಡಿಯಾಗಿ ಹೇಳಿದಳು.

ಗಿರಿಗೆ ಈಗ ಅರಿವಾಯಿತು; ಎಚ್ಚರವಾಯಿತು! ಹೆಂಡತಿ ತುಂಬು ಬಸಿರಿ ಎಂದೂ, ಅದಕ್ಕೆ ಅವಳು ಹಾಗೆ ಮಾಡಿದುದು ಸರಿ ಎಂದೂ ಮನಸ್ಸಿಗೆ ಎನ್ನಿಸಿತು.

ವಿವೇಚನೆ ಬಂದೊಡನೆ ಎಲ್ಲವೂ ಸರಿಹೋಗುತ್ತೆ. ಸ್ವಲ್ಪ ಹೊತ್ತಿನ ನಂತರ, ಅವಳ ಕೆನ್ನೆಗಳನ್ನು ಮೃದುವಾಗಿ ನೇವರಿಸುತ್ತಾ, "ಕ್ಷಮಿಸಬೇಕಾದವನು ನಾನಲ್ಲ ಕಣೇ. ನೀನು ಕ್ಷಮಿಸಬೇಕು. ತುಂಬಿದ ಕೊಡ ನೀನು. ಹೇಗೂ ಕ್ಷಮಿಸಿದೀಯ, ಅಲ್ಲವೇನೆ. ನಾನು ತಪ್ಪು ಮಾಡಿದ್ದು" ಎನ್ನುತ್ತ ಅವಳ ಗಲ್ಲವನ್ನು ಹಿಡಿದು ತನ್ನೆಡೆಗೆ ತಿರುಗಿಸಿಕೊಂಡನು. ಅವಳು ಏನು ಹೇಳಬೇಕೆಂದಿದ್ದಳೊ, ಆದರೆ ಹೇಳಲು ಆಗಲಿಲ್ಲ.

. . . . . .

# ಹಳದಿ ಅಂಗಿ

ಒಂಬತ್ತು ಗಂಟೆ ಹೊಡೆಯಿತು. ಲೈಟ್ ಒಮ್ಮೆ ಆರಿ ಹೊತ್ತಿಕೊಂಡಿತು. ಈದಿನ ಯಾರೂ ಇಲ್ಲ ನಿದ್ದೆಗೆ ಸ್ವಲ್ಪ ಅವಕಾಶ ಎಂದುಕೊಂಡು, ನಾವು ಮೂವರೂ ಲಲ್ಲೆ ಹೊಡೆಯುತ್ತ ಕುಳಿತು ಕೊಂಡಿದ್ದೆವು. ಅಷ್ಟರಲ್ಲೇ ಹೊರಗೆ ಕುಳಿತಿದ್ದ ಮುದುಕಿ "ನೀಲಾ, ರಸ್ತೆಯಲ್ಲಿ ಯಾರೋ ಎರಡು ಮೂರು ಜನ ಅತ್ತಿಂದಿತ್ತ ತಿರುಗಾಡು ತ್ತಿದ್ದಾರೆ. ಹೊರಗೆ ಬಾರೆ. ನೀವು ಹೀಗೆ ಸುಮ್ಮನೆ ಒಳಗೆ ಕುಳಿತರೆ ಹೇಗೆ" ಎಂದಳು.

ಮುದುಕಿ ಮನೆಗೆ ತೋರಿಕೆಗೆ ಯಜಮಾನಿ. ಏಕೆಂದರೆ ಬಂದವರೊಡನೆ ವ್ಯಾಪಾರ ಗಿಟ್ಟಿಸುವ ಸಾಹಸಿ ಅವಳು.

ನೀಲೆಯು ಹೊರಗೆ ಹೋಗಿಬಂದಳು. ಅವಳ ಹಿಂದೆಯೇ ಆ ಮೂರು ಜನರೂ ಒಳಗೆ ಬಂದರು. ನಾವೆಲ್ಲರೂ ಎದ್ದು ಒಳಗೆ ಹೋಗಿ ನಮ್ಮ ನಮ್ಮ ರೂಮ್ ಸೇರಿಕೊಂಡೆವು. ನಾನು ಮಾತ್ರ ನನ್ನ ಕೋಣೆಯ ಬಾಗಿಲನ್ನು ಪೂರ್ತಿ ಮುಚ್ಚದೆ ಹೊರಗೆ ನಡೆಯು ವುದನ್ನು ಗಮನಿಸುತ್ತಿದ್ದೆ,

ಮುದುಕಿ ವ್ಯಾಪಾರ ಕುದುರಿಸುತ್ತಿದ್ದಳು. ಪಾಪ, ಆ ಮೂವರಲ್ಲಿ ಒಬ್ಬನು ಆ ಕೆಲಸಕ್ಕೇ ಹೊಸಬನಂತಿದ್ದನು. ಅವನ ಮಾನಸಿಕ ಉದ್ವಿಗ್ನತೆ ಮುಖಭಾವದಲ್ಲಿ ನಡತೆಯಲ್ಲಿ ಸ್ಫುಟವಾಗಿ ತೋರುತ್ತಿತ್ತು. ಬಂದವರ ಮನೋಭಾವವನ್ನು ಅರಿಯುವುದರಲ್ಲಿ ನಾವು ಚತುರರು. ಆ ಕೆಲಸ ನಮಗೆ ಅತಿ ಸುಲಭ. ದಿನವೂ ನಾಲ್ಕಾರು ಹೊಸಮುಖಗಳನ್ನು ನೋಡುತ್ತೇವೆ. ದಿನವೂ ನಾಲ್ಕಾರು ತರಹೆ ರೀತಿ, ನೀತಿ, ನಡತೆಯುಳ್ಳ ಜನರೊಡನೆ ಒಡನಾಡುವ ಪರಿ ಪಾಠ ನಮ್ಮದು. ಆದುದರಿಂದ ಯಾರೇ ಹೊಸಬರು ಬರಲಿ ಅವರು

ಎಂಥವರೆಂಬುದನ್ನು ಅರಿಯಲು ನಮಗೇನೂ ಕಷ್ಟವಲ್ಲ. ಉಳಿದ ಇಬ್ಬರು ಮಾತನಾಡುವ ರೀತಿಯನ್ನು ನೋಡಿದರೆ ಅವರೇನೂ ಈ ಕೆಲಸಕ್ಕೆ ಹೊಸಬರಲ್ಲವೆಂದೂ, ಈ ಕಸುಬಿನಲ್ಲಿ ಪಳಗಿದವರೆಂದೂ ಕಂಡುಬರುತ್ತಿತ್ತು.

"ನೀಲಾ ರಾಧಾ ಸುಶೀಲಾ ಹೊರಕ್ಕೆ ಬನ್ನಿ" ಎಂದು ಮುದುಕಿಯು ನಮ್ಮನ್ನು ಕೂಗಿದಳು. ನಾವೆಲ್ಲರೂ ನಮ್ಮ ವೃತ್ತಿಗೆ ಅನುಗುಣವಾದ ವೈಯಾರವನ್ನು ಬೀರುತ್ತಾ ಹೊರಕ್ಕೆ ಬಂದು ಅವರ ಎದುರಿನಲ್ಲಿ ಮುಗುಳುನಗೆ ಸೂಸುತ್ತಾ ಕುಳಿತೆವು. ತನಗೆ ಸಾಧಿಸಿದ ಮಾತುಗಾರಿಕೆಯನ್ನೆಲ್ಲಾ ಉಪಯೋಗಿಸಿ ಮುದುಕಿಯೇ ನಮ್ಮನ್ನು ಹೊಗಳಿದಳು.

ನಮ್ಮಲ್ಲಿ ನಾನೇ ಹಿರಿಯಳು. ಆದರೂ ರೂಪಿನಲ್ಲಿ ಮಾತ್ರ ನೀಲಾ, ಸುಶೀ ಇವರಿಗಿಂತಲೇನೂ ಕಡಿಮೆ ಇರಲಿಲ್ಲ. ಬಂದವರು ಎಳೆತನಕ್ಕೆ ಹೆಚ್ಚು ಬೆಲೆ ಕೊಡುತ್ತಿದ್ದರು. ಆದುದರಿಂದ ನಾನು ಯೋಚಿಸಿದಂತೆಯೇ ಹೊಸಬನೇ ನನ್ನ ಪಾಲಿಗೆ ಬಂದನು. ನಾವು ನಮ್ಮ ನಮ್ಮ ರೂಮು ಸೇರಿದೆವು.

ಒಳಗೆ ಹೋದವಳೇ ನಾನು ಮಂಚದಮೇಲೆ ಬಾಗಿ ಕುಳಿತು ಅವನನ್ನು ನಗುತ್ತ ಸ್ವಾಗತಿಸಿದೆ. ಇತ್ತಂಡವಾದ ಮನಸ್ಸಿನಿಂದ ಅವನು ಮುಂದೆ ಬರದೆ ಬಾಗಿಲಲ್ಲೇ ನಿಂತನು. ಅವನು ನಿಜವಾಗಿಯೂ ಹೊಸಬ.

"ಒಳಗೆ ಬರಬಾರದೆ" ನಾನು ನಗುತ್ತ ಬಾಗುತ್ತ ಬಳಕುತ್ತ, ಎದ್ದುಹೋಗಿ, ಅವನ ಕೈ ಹಿಡಿದು ಕರತಂದು ಮಂಚದಮೇಲೆ ದೊಪ್ಪನೆ ಕುಳ್ಳಿರಿಸಿದೆ. ಪಾಪ, ಅವನ ಕೈ ತುಂಬ ಬಿಸಿಯಾಗಿತ್ತು. ಹಣೆಯಮೇಲೂ ಮುಖದಮೇಲೂ ಬೆವರಹನಿಗಳು ಇಳಿಯುತ್ತಿದ್ದವು.

"ಗಾಳಿ ಹಾಕಲೆ? . . . . . ಏನಾದರೂ ತಣ್ಣನೆ ಪಾನೀಯವನ್ನು ತರಿಸಲೇ?" ನಾನು ಮೃದುವಾಗಿ ಕೇಳಿದೆ.

"ಬೇಡ ಬೇಡ . . . . ಅದೆಲ್ಲ ಬೇಕಾಗಿಲ್ಲ"

ನಾನು ವೀಳೆಯದೆಲೆಯ ತಟ್ಟೆಯನ್ನು ಮುಂದಿಟ್ಟು ಅವನ ಮುಖ ನೋಡಿದೆ. ಅವನ ದೃಷ್ಟಿ ಗೋಡೆಯಮೇಲೆ ಮೊಳೆಗೆ ತೂಗುಹಾಕಿದ್ದ ನನ್ನ ಮಗುವಿನ ಹಳದಿ ಅಂಗಿಯಮೇಲೆ ನಟ್ಟಿತ್ತು.

"ವೀಳ್ಯವನ್ನು ಹಾಕೊಲ್ಲವೇ ?"

"ಆಂ" ಏನೋ ಒಂದು ಆಲೋಚನೆಯಿಂದ ಎಚ್ಚರಗೊಳಿಸಲ್ಪಟ್ಟವನಂತೆ ನನ್ನ ಕಡೆಗೆ ತಿರುಗಿ ನೋಡಿದನು.

"ವೀಳ್ಯವನ್ನು ಕೊಡಲೇ ?"

"ಬೇಡ . . . . ನಾನು . . . . ನನಗೆ ವೀಳ್ಯದ ಅಭ್ಯಾಸವಿಲ್ಲ"

"ಸಿಗರೇಟು ತರಿಸಲೇ ?"

"ಬೇಡ ಬೇಡ . . . . ಅದೂ ಬೇಡ"

ಪುನಃ ಅವನ ನೋಟ ಆ ಹಳದಿ ಅಂಗಿಯ ಕಡೆ ಹೊರಳಿತು.

"ನೀವು ಎಂದಾದರೂ ಇದಕ್ಕೆ ಮೊದಲು ಇಂತಹ ಮನೆಗೆ ಹೋಗಿದ್ದಿರಾ ?" ನಾನು ಅವನ ಮನಸ್ಸನ್ನು ನನ್ನ ಕಡೆ ತಿರುಗಿಸಿದೆ.

"ಹೋ, ಹೋಗದೆ ಏನು"

ಅವನು ಧೈರ್ಯವಾಗಿ ಹೇಳಿದ್ದರೂ ಅವನ ಧ್ವನಿ ಮಾತ್ರ ಅವನು ಇಂತಹ ಮನೆಗೆ ಎಂದೂ ಪ್ರವೇಶಿಸಿಲ್ಲವೆಂದು ಸೂಚಿಸುತ್ತಿತ್ತು.

"ಸರಿ ಸರಿ. ಅದಕ್ಕೇನೆ ಹೀಗೆ ಗಡಿಗೆ ಗುಮ್ಮನಂತೆ ಇರೋದು . . . . ನಿಮ್ಮಂತವರ ಒಡನಾಟ ಕಷ್ಟ" ಎನ್ನುತ್ತಾ ನಾನೇ ಅವನ ಕೈ ಹಿಡಿದು ನನ್ನ ಕಡೆ ಎಳೆದುಕೊಂಡೆ.

"ನಿಮ್ಮ ಹೆಸರು . . . . ಏನು ಅಂತ ಕೇಳಬಹುದೇ ?"

"ಹೋ. ಅದಕ್ಕೇನು. ಶ್ರೀಕುಮಾರ್ ಅಂತ . . . . ನಿಮ್ಮ . . . . ನಿನ್ನ ಹೆಸರು ?"

"ಅನೂರಾಧಾ."

"ಚೆನ್ನಾಗಿದೆ ಹೆಸರು."

"ಅಂದರೆ ನಾನು ಚೆನ್ನಾಗಿಲ್ಲಾ ಅಂತೇನೋ?"

"ಛೆ, ಛೆ. ಹಾಗೆಂದೆನೆ ನಾನು."

"ನಾನು ಕೇಳಿದ್ದು ನಾನು ಚೆನ್ನಾಗಿಲ್ಲವೇ ಅಂತ?"

"ಹೂಂ. ನೀನೂ ಚೆನ್ನಾಗಿರುವೆ...... ನಿನ್ನ ಹೆಸರೂ ಅಷ್ಟೆ."

ಪುನಃ ಮೌನ. ಅವನ ಕಣ್ಣು ಹಳದಿ ಅಂಗಿ ಕಡೆಗೆ. ಈ ತರಹೆಯವರನ್ನು ನಾನು ಎಂದೂ ನೋಡಿರಲಿಲ್ಲ. ಏನು ಮಾಡ ಬೇಕೆಂದು ನನಗೆ ಹೊಳೆಯಲಿಲ್ಲ. ಮತ್ತೆ ಮಾತನ್ನೇ ಮುಂದುವರಿಸಿದೆ.

"ನಿಮಗೆ ನನ್ನನ್ನು ನೋಡಿ ಏನೂ ಎನ್ನಿಸೋಲ್ವೆ"

"....ಅಂದರೆ...."

ನಾನು ತಟ್ಟನೆ ಎದ್ದೆ. ಅವನ ಮುಖವನ್ನು ನನ್ನ ಎರಡೂ ಕೈಗಳಿಂದ ಮೆಲ್ಲಗೆ ಹಿಡಿದು, ನನ್ನ ಕಡೆಗೆ ತಿರುಗಿಸಿಕೊಂಡು, ಉತ್ತೇಜಕ ದೃಷ್ಟಿಯಿಂದ ನೋಡತೊಡಗಿದೆ. ಅವನ ಮೇಲೆ ಏನೂ ಪರಿಣಾಮವಾಗಲಿಲ್ಲ.

"ನೀವು ಬಂದುದಾದರೂ ಏತಕ್ಕೆ?"

"ಅದೋ ಹೀಗಾಯಿತು. ನಿಜ ಹೇಳಲೆ? ನಾನು ಎಂದೂ ಇಂತಹ ಕಡೆ ಬಂದವನೇ ಅಲ್ಲ. ಅಷ್ಟೇ ಅಲ್ಲದೆ ಮನೆಯಲ್ಲಿ.. ... ನನ್ನವಳು...." ಅವನ ಮಾತು ಮುಗಿಯಲಿಲ್ಲ. ಪುನಃ ಮೌನ.

"ಓಹೊ. ಮನೆಯಲ್ಲಿ ಹೆಂಡತಿ ಇದಾಳೆ"

"........."

"ಹಾಗಾದರೆ ಬಾದಿದೀರಲ್ಲ. ಏಕೆ?"

"ನನ್ನ ಸ್ನೇಹಿತ ನಾನು ಇದಕ್ಕೆಲ್ಲಾ ಸಿದ್ಧ ಅಂತ ಎಳೆದು ಕೊಂಡು ಬಂದ. ಅವರೆದುರು ಇಲ್ಲವೆನ್ನಲಿಕ್ಕಾಗದೆ ಬಂದೆ" ಪುನಃ ನೋಟ ಹಳದಿ ಅಂಗಿ ಕಡೆಗೆ.

"ಆದರೂ ಒಂದು ಕೈ ನೋಡೋಣ ಅಂತಲೋ?"—ಈ ಮಾತು ಅವನನ್ನು ಚುರುಕು ಮಾಡಿತು. ನಿಟ್ಟಿಸಿ ನನ್ನ ಕಡೆಗೆ ನೋಡತೊಡಗಿದ.

"ಏನ್ರಿ, ನಿಮ್ಮ ಹೆಂಡತಿ ಹೆಸರೇನು . . . . ಏಕೆ, ಹೇಳಲಿಕ್ಕೆ ನಾಚಿಕೇನಾ"

"ಇಲ್ಲಾ . . . . ಮನೋರಮಾ ಅಂತ . . . ."

"ನನಗಿಂತಲೂ ಚನ್ನಾಗಿದ್ದಾರಾ?"

"ಹುಂ. ಚೆನ್ನಾಗಿದಾಳೆ ಅನ್ನಬಹುದು"

ಅವನು ಪುನಃ ಹಳದಿ ಅಂಗಿ ಕಡೆಗೆ ನೋಡುತ್ತಲಿದ್ದ.

ನನ್ನ ಮನಸ್ಸು ಇದುವರೆಗೂ ನನ್ನ ವೃತ್ತಿಗೆ ಬಗ್ಗಿ ನಡೆದಿತ್ತು. ಇಂದೋ ರೊಚ್ಚಿಗೆದ್ದಿತು. ಒಬ್ಬನನ್ನು ಉದ್ರೇಕಿಸಲಾಗದಿದ್ದುದು ಸೋಲು. ಆ ಸೋಲಿನ ಸೇಡಿಗೆಂದು ಎದ್ದವಳೇ ಅವನ ಮನಸ್ಸನ್ನು ತನ್ನೆಡೆಗೆ ಎಳೆಯುತ್ತಿದ್ದ ಆ ಹಳದಿ ಅಂಗಿಯನ್ನು ತೆಗೆದು ಮೂಲೆಗೆ ಬಿಸಾಕಿದೆ. ಅವನೋ, ಸಿಧಾನವಾಗಿ ಎದ್ದನು; ಅದನ್ನು ತೆಗೆದು ಕೊಂಡು ಬಂದು ಹಾಸಿಗೆಯಮೇಲೆ ನನ್ನ ಪಕ್ಕದಲ್ಲಿ ಕುಳಿತನು.

"ಈ ಅಂಗಿ ಯಾರದು?"

"ನನ್ನ ಮಗುವಿನದು"

ಅವನು ಆಶ್ಚರ್ಯದಿಂದ ಎದ್ದುನಿಂತನು. ಕಣ್ಣುಗಳು ಅರಳಿದ್ದುವು. ಮಾತು ಮುಗಿಯಿತು.

ನಾನೇ ಪುನಃ ಕೇಳಿದೆ, "ಏಕೆ, ನನಗೆ ಮಗು ಇರಬಾರದೆ?"

"ಛೆ. ನಿಜವಾಗಿಯೂ ನನಗೆ ಸಂತೋಷ. ಮಕ್ಕಳೆಂದರೆ ನನಗೆ ಜೀವ. ನಿನ್ನ ಮಗು ಹೇಗಿದೆ? ಏನು ಹೆಸರು?"

ಇಷ್ಟು ಹೊತ್ತೂ ಮಂದನಾಗಿದ್ದ ಅವನಲ್ಲಿ ಈಗೊಂದು ಹೊಸ ಉತ್ಸಾಹ ತುಂಬಿ ಬಂದಿತ್ತು. ಕಣ್ಣಿಗೊಂದು ಕಳೆ, ಮಾತಿಗೊಂದು ಕಳೆ ಬಂದಿತ್ತು.

"ಹೇಳಲೇ. ಕಮಲಾ ಅಂತ ಹೆಸರು. ಅವಳು ಅಷ್ಟು ಚೆನ್ನಾಗಿಲ್ಲ"

"ಎಷ್ಟು ವರ್ಷ?"

"ಮೂರು ತುಂಬಿದೆ"

"ಹೋ. ನನ್ನ ಕೂಸಿನದೂ ಅಷ್ಟೆ. ಮಗು ಎಲ್ಲಿದೆ?"

"ಪಕ್ಕದ ರೂಮಿನಲ್ಲಿ ಮಲಗಿದೆ"

"ನಾನು ನೋಡಲೇ?"

"ಬೇಡ ಬೇಡ . . . . ಪರವಾಗಿಲ್ಲ . . . . ಆದರೆ . . . ಅದು ನಿದ್ದೆಮಾಡುತ್ತಿದೆ . . . . . . ಅಲ್ಲದೆ . . . . . ಅದು ಅಷ್ಟೇನೂ ಚೆನ್ನಾಗಿಲ್ಲ."

ನನ್ನ ಮಗು ಚೆನ್ನಾಗಿಲ್ಲ ಅನ್ನಲು ತಾಯಿಯ ಕರುಳಿಗೆ ಹೇಗೋ ಅನಿಸಿತು. ಅವನು ರೂಮಿನ ಕಡೆ ನನ್ನ ಕೈ ಹಿಡಿದು ಕೊಂಡು ಹೊರಟನು. ನನ್ನ ಮಗುವಿನ ಪಕ್ಕದಲ್ಲಿ ಕುಳಿತನು. ಅಲ್ಲದೆ ನನ್ನನ್ನೂ ತಾನೇ ಕೈ ಹಿಡಿದೆಳೆದು ತನ್ನ ಪಕ್ಕದಲ್ಲಿ ಕುಳ್ಳಿರಿಸಿ ಕೊಂಡನು.

"ಹುಂ. ಈಗ ಸರಿಯಾಯಿತು" ನಾನೆಂದೆ.

"ಏನು?"

"ಅಲ್ಲ. ಬಂದು ಇಷ್ಟುಹೊತ್ತಿಗೆ ನೀವಾಗಿ ನನ್ನ ಹಿಡಿದು ಹತ್ತಿರ ಕೂಡಿಸಿಕೊಂಡಿರಲ್ಲಾ."

"ಹೌದು. ಜೋರಾಗಿ ಮಾತಾಡಬೇಡ. ಮಗು, ಪಾಪ, ಎದ್ದೀತು . . . ." ಅವನು ನಿಡಿದಾದ ಉಸುರ್ಗರೆದನು.

"ಏಕೆ?"

"ಅಲ್ಲ . . . . ಈ ಮಗುವೂ . . . . ಮುಂದೆ . . . . ಇಂತಹ ಜೀವನವನ್ನು ನಡೆಸಬೇಕೆ?"

". . . . . ."

ಬಾಗಿಲನ್ನು ಯಾರೋ ತಟ್ಟಿದಂತಾಯಿತು.

"ಏನದು?"

"ನಿಮ್ಮ ಗೆಳೆಯರು ಮನೆಗೆ ಹೊರಡಲು ತಯಾರಾಗಿದಾರೆ. ನಿಮಗೂ ಹೊರಡಲು ಸೂಚನೆ."

"ಹಾಗೇನು. ನಾನು ಬಂದು ಬಹಳ ಹೊತ್ತಾಯಿತೇ? ನಿಜವಾಗಿಯೂ ನಾನು ಹೋಗಬೇಕೆ?"

"ಅಷ್ಟಲ್ಲದೆ ಏನು. ಅವರು ಹೊರಟಿದಾರೆ."

"ಅವರು ಬೇಕಾದರೆ ಹೋಗಲಿ. ನಾನು ನಿನ್ನ ಮಗುವಿನ ವಿಷಯವಾಗಿ ಇನ್ನೂ ಮಾತನಾಡುವುದಿದೆ. ನಾವಿಬ್ಬರೂ ಇದನ್ನು ಇನ್ನೂ ಪರಸ್ಪರ ಚೆನ್ನಾಗಿ ತಿಳಿದುಕೊಳ್ಳಬೇಕು"

"ಅದೇಕೆ?"

"ಅದರಲ್ಲಿ ತೊಂದರೆ ಏನಿದೆ?"

"......"

"ಹಾಗಾದರೆ ಹೋಗು. ಸ್ವಲ್ಪ ಹೊರಗೆ ಹೋಗಿ ಆ ಮುದುಕಿಗೆ ಹೇಳಿ ಬಾ. ನಾನು ಇಡೀ ರಾತ್ರಿಯನ್ನು ಇಲ್ಲೇ ಕಳೆಯುವೆನೆಂದು."

"ಪರವಾ ಇಲ್ಲ. ಬಿಡಿ. ಮುದುಕಿಗೆ ಹೇಳಬೇಕಿಲ್ಲ." ಮತ್ತೊಮ್ಮೆ ಅವನು ಮಗುವನ್ನು ನೋಡಿದನು. ತನ್ನ ಕೋಟಿನ ಜೇಬಿಗೆ ಕೈ ಹಾಕಿ ಪರ್ಸ್ ತೆಗೆದು ಕೆಲವು ನೋಟು ಕೊಡಲು ಬಂದನು.

ನಾನು ಅವನ ಮನಸ್ಸನ್ನು ತಿರುಗಿಸಲು, "ಬೇಡ. ಮಗು ವಿಷಯವಾಗಿ ಏನೇನೋ ಹೇಳಬೇಕೆಂದಿರಲ್ಲ. ಅಲ್ಲವೇ?" ಎಂದೆ. ಅವನ ಹಣ ಒಂದು ಕಾಸೂ ನನಗೆ ಬೇಕಿರಲಿಲ್ಲ. ಪರಿಶುದ್ಧ ಪ್ರೇಮ, ಅವನ ವಿಚಾರದಲ್ಲಿ ಅನಿರ್ವಚನೀಯವಾದ ಪೂಜ್ಯಭಾವ ನನ್ನಲ್ಲಿ ಇಷ್ಟರಲ್ಲೇ ಅದೇಕೋ ಮೂಡಿತ್ತು.

"ಇಲ್ಲಿ ನೋಡು, ರಾಧಾ . . . . "

ಏನು ಮಾಧುರ್ಯ ಆ ದನಿಯಲ್ಲಿ! ನನ್ನ ಹೆಸರನ್ನು, ನನಗೆ ಪ್ರಿಯವಾದ ರೀತಿಯಲ್ಲಿ ಕೇಳಿ ಆದ ಆನಂದ ಅಷ್ಟಿಷ್ಟಲ್ಲ. ನೂರು ಜನ ನೂರು ಬಾರಿ ನನ್ನನ್ನು ಆ ಹೆಸರಿನಿಂದ ಕರೆದಿರಬಹುದು. ಈಗ ನಾನು ಅನುಭವಿಸಿದ ತೃಪ್ತಿ, ಸೊಬಗು, ಮಾಧುರ್ಯ ಹಿಂದೆಂದೂ ಕಂಡಿರಲಿಲ್ಲ.

"ರಾಧಾ, ಈ ಮಗು ಇಲ್ಲಿ ಬೆಳೆಯಬಾರದು. ಈ ಕಸಬಿಗೆ ಬರಬಾರದು."

". . . . . ."

"ನೋಡು. ಯಾವುದಾದರೊಂದು ಆಶ್ರಮಕ್ಕೋ, ಅನಾಥಾಲಯಕ್ಕೋ ಸೇರಿಸಿಬಿಡು."

". . . . . .".

"ಏಕೆ, ನಾನನ್ನುವುದು ಸರಿಯಿಲ್ಲವೇ?"

"ಸರಿಯೇ. ಆದರೂ ಈ ಮಗು, ನನ್ನ ಈ ಕಹಿಬಾಳಿನಲ್ಲಿ, ನೋಡಿ ಸಂತೋಷ ಪಡೆಯಲು ಸಾಧನ. ಅದೊಂದೇ ನನ್ನ ಜೀವನದಲ್ಲಿ ನನಗೆ ಮನಶ್ಶಾಂತಿ ಕೊಡುವ ವಸ್ತು. ಅದನ್ನು ಬಿಟ್ಟಿರುವುದು . . . ." ನಾನು ದುಃಖದ ಉದ್ವೇಗದಿಂದ ಮಾತು ಮುಗಿಸಲಾರದೆ ಹೋದೆ.

"ಅದಕ್ಕೇನೆ ನಾನು ಹೇಳುವುದು. ಈ ಮಗು ನಿನ್ನ ಬಾಳಿನ ಸರ್ವಸ್ವ. ಅವಳು ನಿನಗೆ ಬೇಕಾದವಳಾದ್ದರಿಂದಲೇ ಅವಳ ಭವಿಷ್ಯವನ್ನಾದರೂ ಯೋಗ್ಯರೀತಿಯಿಂದ ನಡೆಸುವಂತೆ ಮಾಡು, ಎಂದು ನಾನು ಕೊಟ್ಟ ಸಲಹೆ."

"ನೀವೆನ್ನುವುದು ಸರಿ. ಮುಂದೆ ನನ್ನನ್ನಾದರೂ ನೋಡಿಕೊಳ್ಳುವವರು ಯಾರು? ಅವಳು ನನ್ನಿಂದ ದೂರವಾದರೆ ಕೊನೆಗೆ ನಾನೇನು ಮಾಡಬೇಕು. ಹೂವಿನಲ್ಲಿ ಕಂಪು ಇರುವವರೆಗೆ ದುಂಬಿ

ಬರುತ್ತವೆ. ನಾನು ಮುದುಕಿಯಾದಾಗ . . . . ನನ್ನ ಕೊನೆಗಾಲದಲ್ಲಿ ಒಂದು ತುತ್ತು ಅನ್ನ ಹಾಕುವವರೂ ಬೇಡವೇ?"

"ರಾಧಾ, ಅವಳು ಅದೇ ಕಸಬಿಗೆ ಬೀಳಬೇಕೇ ನಿನಗೊಂದು ತುತ್ತು ಅನ್ನ ಹಾಕಲು? ಅಥವಾ, ಅವಳು ಅದೇ ಕಸಬಿಗೆ ಬಿದ್ದಮಾತ್ರಕ್ಕೇನೆ ನಿನ್ನನ್ನು ಕಾಪಾಡುವಳೆಂದು ಏನು ನಿಶ್ಚಯ? ಇಲ್ಲಿ ನೋಡು. ಎಷ್ಟು ಸುಖವಾಗಿ ನಿರಾಲೋಚನೆಯಿಂದ ಮಗು ಮಲಗಿದೆ. ಹೀಗೆಯೇ ಅದರ ಜೀವನವೂ ಸುಖಶಾಂತಿಮಯವಾಗ ಬಾರವೇ"

"ಹೌದು. ಆಗಬೇಕು. ಆಗಬೇಕು."

"ಹಾಗಾದರೆ, ರಾಧಾ, ಅವಳನ್ನು ಉತ್ತಮ ರೀತಿಯ ಜೀವನಕ್ಕೆ ತಯಾರು ಮಾಡುವೆನೆಂದು ಮಾತುಕೊಡುವೆಯಾ"

"ಮಾತು ಕೊಡಬೇಕೆ? ಸೂಳೆಯ ಮಾತಿನಲ್ಲಿ ನಂಬಿಕೆ ಇಡಬಲ್ಲಿರಾ?"

"ರಾಧಾ, ಮಾತು ಕೊಡು ಎಂದು ನಾನು ಕೇಳುತ್ತಿರುವುದು ಸೂಳೆಯನ್ನಲ್ಲ. ಈ ಚಿನ್ನದಂತಹ ಮಗುವಿನ ತಾಯಿಯನ್ನು ನಾನು ಕೇಳುತ್ತಿದೇನೆ. ತಾಯಿಯು ತನ್ನ ಮಗುವಿನ ಹಿತಚಿಂತನೆ ವಿಷಯದಲ್ಲಿ ಕೊಡುವ ಮಾತಿನಲ್ಲಿ ನನಗೆ ನಂಬಿಕೆ ಇದೆ; ಪೂರ್ಣ ವಿಶ್ವಾಸವಿದೆ."

ನನ್ನ ಎದೆಯು ಡವಡವನೆ ಬಡಿಯುತ್ತಿದ್ದುದು ನನಗೆ ಕೇಳಿಸುತ್ತಿತ್ತು. ಮಾತು ಕೊಟ್ಟೆನೆಂದು ಅಂತರಾತ್ಮ ಹೇಳುತ್ತಿತ್ತು. ಗಂಟಲು ಕಟ್ಟಿ ಮಾತನಾಡಲಾರದೆ ನಾನು ಇದ್ದೆ. ಅವನು ನಿಧಾನವಾಗಿ ನನ್ನ ಮುಖವನ್ನೆತ್ತಿ, ನನ್ನ ಹಣೆಯನ್ನು ವಾತ್ಸಲ್ಯದಿಂದ ಚುಂಬಿಸಿ, "ರಾಧಾ, ಮಗು ಜೋಕೆ. ನಾನು ನಿನಗೆ ಹೇಳಿದುದನ್ನು ಮರೆಯದಿರು, ತಿಳಿಯಿತೆ"—ಎಂದು ಬಾಗಿಲನ್ನು ಮುಚ್ಚಿಕೊಂಡು ಹೊರಟ.

. . . . . .

# ಅವಳ ಮನಸ್ಸು

ಸಾವಿತ್ರಿಗೆ ಆ ದಿನ ಅಸಾಧ್ಯವಾದ ಸಿಟ್ಟು ಬಂದಿತ್ತು. "ನಾಯಿಯ ಬಾಲ ಎಷ್ಟಾದರೂ ಡೊಂಕೇ . . . ." ಛೇ, ಛೇ, ತನ್ನ ಸ್ವಾಮಿಯನ್ನು ನಾಯಿಗೆ ಹೋಲಿಸಿಬಿಟ್ಟೆನಲ್ಲಾ ಎಂದು ಅವಳಿಗೆ ಫಕ್ಕನೆ ಅರಿವಾಗಿ, ಮನಸ್ಸು ಸ್ವಲ್ಪ ಬೆಚ್ಚಿತು. ಎದುರಿನಲ್ಲಿದ್ದ "ಅವರ" ಫೋಟೋಕ್ಕೆ ಒಂದು ಸಲ ನಮಸ್ಕಾರ ಹಾಕಿದಳು. ಆದರೂ, ಆ ದಿನ ಬೆಳಿಗ್ಗೆ ಅವರು ಆಸ್ಪತ್ರೆಗೆ ಕೆಲಸದ ಮೇಲೆ ಹೊರಡುವಾಗ, ಮಧ್ಯಾಹ್ನದ ಕಾಫಿಗೆ ಮನೆಗೇ ಬನ್ನಿರೆಂದು ಹತ್ತು ಹತ್ತು ಸಲ ತಾನು ಹೇಳಿದರೂ, ಅವರು ಐದು ಘಂಟೆ ಹೊಡೆದು ಎಷ್ಟೋ ಹೊತ್ತಾಗಿದ್ದರೂ ಸಹ ಬಂದಿರಲಿಲ್ಲ. ಸರಿ. ಯಾರಿಗೆ ತಾನೇ ಸಹಿಸಲಾದೀತು? ಬಾಚಿದ್ದ ತಲೆಯನ್ನು ಮತ್ತೊಮ್ಮೆ ನೇವರಿಸಿಕೊಂಡು, ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುತ್ತ, ತನ್ನ ರೂಪದ ಕಡೆಗೆ ಮನಸ್ಸನ್ನೆಳೆಯಲು ಯತ್ನಿಸಿದಳು. ಆದರೆ, ನೊಂದ ಮನಸ್ಸು ಪುನಃ ಆ ಕಡೆಗೇ ಎಳೆಯಿತು.

"ಹುಟ್ಟುಗುಣ ಕಟ್ಟಿಗೆಯಲ್ಲಿ ಹೊಡೆದರ ಹೋದೀತೇ? ತಮ್ಮದೇ ತಮ್ಮದು. ಗಂಡಸರಿಗೇನು. ಯಾರಾದರೂ ಸಿಕ್ಕೇ ಸಿಗುತ್ತಾರೆ. ಎಲ್ಲಿಯಾದರೂ ಕಾಫಿ ಆಗಿಯೇ ಆಗುತ್ತೆ. ಮನೆಗೇ ಬರಬೇಕೇ? ಹೂಂ." ಏನೋ ಹೊಸವಿಷಯ ಭಾಸವಾದಂತೆ ಕನ್ನಡಿಯನ್ನು ಬೇರೆ ಕಡೆಗೆ ಇಟ್ಟಳು. "ಹೂ. ನನ್ನೊಡನೆ ಮಾತಾಡಿದರ ಎಲ್ಲಿ ಅಷ್ಟು ಸೊಗಸಾದೀತು" ಎಂದು ಗುಣಗುಟ್ಟುತ್ತ ರೂಮಿನಿಂದ ಹೊರಟು, ಹೊರ ಜಗುಲಿಗೆ ಬಂದು, ಹತ್ತನೆಯ ಸಲ ರಸ್ತೆಯ ಕಡೆ ನೋಡಿದಳು. ಅವರ ಸುಳಿವಿದ್ದರೆ ತಾನೆ. ಅವರು ಬಂದರೆ ಮೋಟಾರ್ ಸೈಕಲ್ಲಿನ ಶಬ್ದ ಕೇಳಿಸುವುದಿಲ್ಲವೇ? ಏನು

ಸುಮ್ಮನೆ ನಡೆದುಬರುತ್ತಾರೇ? ಈ ಆಲೋಚನೆ ಬಂದು, ತಾನು ಹತ್ತು ಸಲ ಹೊರಗೆ ಬಂದು ಇಣಿಕಿಹಾಕಿದುದಕ್ಕೆ ತನ್ನಷ್ಟಕೆ ತಾನೇ ನಕ್ಕಳು.

ಮನಸ್ಸಿನ ರೀತಿ ಬಹಳ ವಿಚಿತ್ರ. ಕಾರಣವಿದ್ದೋ ಅಥವಾ ಇಲ್ಲದೆಯೋ ಬೇಜಾರು ಮಾಡಿಕೊಂಡು ಒಮ್ಮೆ ಗಡಿಗೆ ಮುಖ ಮಾಡಿಕೊಂಡೆವೆಂದರೆ ಸರಿ, ಅದೇ ಮನಸ್ಸಿನಲ್ಲುಳಿದು ಕ್ಷಣಕ್ಷಣಕ್ಕೆ ಹೆಚ್ಚುತ್ತದೆ. ಇಲ್ಲದ ಸಲ್ಲದ ಯೋಚನೆಗಳೂ ಬರುತ್ತವೆ.

ಸಾವಿತ್ರಿಯ ಮನಸ್ಸಿನ ಸ್ಥಿತಿಯಾದರೂ ಹಾಗೇ ಆಗಿತ್ತು. ಅವರು ಇಷ್ಟು ಹೊತ್ತಾದರೂ ಮನೆಗೆ ಬರಲಿಲ್ಲವಲ್ಲ ಎಂದು ಒಮ್ಮೆ ಉದ್ಗಾರ ತೆರೆದಳು. ಸರಿ. ಆ ಬೇಜಾರು ಒಮ್ಮೆಲೇ ಅವಳ ಮನಸ್ಸನ್ನಾವರಿಸಿತು; ಕ್ಷಣಕ್ಷಣಕ್ಕೂ ಹೆಚ್ಚಾಗತೊಡಗಿತು.

ಹಿಂದೆ ಇಂತಹ ಸಿರಾಸೆಗಳು ಎಷ್ಟೋ ಕಳೆದುಹೋಗಿದ್ದುವು. ಅವರಿಗೆ ಕಡುಬು ಪ್ರೀತಿಯಾದ ತಿಂಡಿಯೆಂದು ಅದನ್ನು ಒಂದು ದಿನ ಮಾಡಿಟ್ಟುಕೊಂಡು ಸಂಜೆಯವರೆಗೂ ಕಾದಿದ್ದಳು. ಅವರು ಮಾತ್ರ ಇಂದಿನಂತೆಯೇ ಬಂದಿರಲಿಲ್ಲ. ಕೈ ರಟ್ಟೆ ಮುರಿಯುವವರಿಗೆ ಹಿಟ್ಟು ಬೀಸಿದ್ದಲ್ಲದೆ, ಅಂದು ಕಡುಬು ಹಳಸಿದ್ದರೂ ಅವಳಿಗೆ ಬೇಸರ ವಿರಲಿಲ್ಲ. ಏಕೆಂದರೆ ಮನಸ್ಸಿನ ಅಂದಿನ ಓಟ ಹೀಗಿತ್ತು, "ಏನೋ, ಕೆಲಸ ತುಂಬ ಇದೆಯೋ ಏನೋ, ಕಾಹಿಲೆಯವರನ್ನು, ಪಾಪ, ಬಿಟ್ಟುಬರುವುದು ಹೇಗೆ? ಕಾಹಿಲೆಯಿಂದ ನರಳುವವರಿಗೆ ಚಿಕಿತ್ಸೆ ಮಾಡುವುದು ಬಿಟ್ಟು ಕಡುಬು ತಿನ್ನಲಿಕ್ಕೆ ಬರಲಾದೀತೇ?" ಹೀಗೆ ಒಂದು ಸಮಾಧಾನ ತಂದುಕೊಂಡಿದ್ದಳು. ಆದುದರಿಂದ ಅಂದು ಸಿರಾಸೆಯಾಗಿದ್ದರೂ ಮನಸ್ಸು ನೊಂದಿರಲಿಲ್ಲ; ಅವಳಿಗೆ ಬೇಜಾರೂ ಆಗಿರಲಿಲ್ಲ.

ಆದರೆ ಈ ದಿನ ಹಾಗಲ್ಲ. ಅವರು ಗೆಳೆಯರೊಡನೆ ಕೂಡಿ, ಎಲ್ಲಿಯೋ ಕಾಫಿ ಕುಡಿದು, ನಲ್ಲಿಯುತ್ತಿರಬಹುದೆಂಬ ಯೋಚನೆ

ಹೇಗೋ ಅವಳ ಮನಸ್ಸನ್ನು ಹಿಡಿದುಬಿಟ್ಟಿದೆ. ಸರಿ. ಮುಂದೆ ಪ್ರತಿಕ್ಷಣಕ್ಕೆ ಬಂದ ಯೋಚನೆಗಳೆಲ್ಲಾ ಇದಕ್ಕೇ ಪುಷ್ಟಿಕೊಡತೊಡಗಿದುವು. ಈಗ ಬಂದಾರು, ಏನೋ ಕೆಲಸವಿರಬಹುದೆಂಬ ಆಲೋಚನೆಗೆ ಸ್ಥಳವೇ ಇಲ್ಲ.

ಹೊತ್ತು ಜಾರಿದಂತೆ ಸಿಟ್ಟು ಏರತೊಡಗಿತು. ಬಾಚಿದ್ದ ತಲೆಯನ್ನು ಕೆದರಿಕೊಳ್ಳಲೇ ಎನಿಸಿತು. ಏತಕ್ಕಾಗಿ ಗಂಟೆಗಟ್ಟಲೆ ಕಷ್ಟಪಟ್ಟು ಕುಂಕುಮ ಇಟ್ಟುಕೊಂಡೆನೋ ಎನ್ನಿಸಿತು. ಕುಂಕುಮ ವಿರುವುದು ಮುತ್ತೈದೆಯ ಲಕ್ಷಣ, ಧರ್ಮ ಹೌದು. ಆದರೆ ಅಷ್ಟೇ ಅಲ್ಲದೆ ಅವರ ಕಣ್ಮನಗಳನ್ನು ಸೆಳೆಯುವುದೂ ಅಲ್ಲವೇ? ಎದುರು ಮನೆಗೆ ಹೋಗಿ ಕುಳಿತು ಹರಟೆ ಹೊಡೆಯೋಣವೆಂದರೆ ಅದೂ ಸರಿಯಾಗಿ ಕಾಣಿಸಲಿಲ್ಲ. ಅವರಾದರೂ ಎಂತಹ ಜನ! ತಮ್ಮದೇ ತಮ್ಮದು. ತಮ್ಮ ಮಾತೇ ತಮ್ಮ ಮಾತು. ಇಲ್ಲಿ ನೋಡಿ, ನಮ್ಮಲ್ಲಿ ಇಷ್ಟು ಸೀರೆ ಇದೆ; ಇಷ್ಟು ಒಡವೆ ಇದೆ; ಇಷ್ಟು ಫರ್ನಿಚರ್ ಮಾಡಿಸಿದೇವೆ—ಎಂದು ತಮ್ಮ ಮನೆಯ ಕ್ಯಾಟಲಾಗನ್ನು ಬಿಚ್ಚಿ ಓದುವರು. ತಾನಿರುವ ಇಂತಹ ಮನಸ್ಥಿತಿಯಲ್ಲಿ ಅದನ್ನೆಲ್ಲಾ ಕೇಳುವುದು ಅಸಾಧ್ಯ, ಅಸಹನೀಯ.

ಸರಿ. ಒಮ್ಮೆಗೇ ಮಿಂಚು ಮಿಂಚಿದಂತೆ ಯೋಚನೆಯೊಂದು ಹೊಳೆಯಿತು. ತವರು ಮನೆಗೆ ಹೋಗಿಬಿಡೋಣವೆಂದು. ಅದಕ್ಕೇನು ಕಷ್ಟಪಡಬೇಕಿಲ್ಲ. ಮೂರು ಬೀದಿ ದಾಟಿದರೆ ನಾಲ್ಕನೇ ಬೀದಿಯಲ್ಲಿ ಮೊದಲನೆಯದೇ ಅವಳ ತವರುಮನೆ. ಅಲ್ಲಿಗೆ ತಾನು ಹೋಗಬೇಕು; ಇವರು ಮನೆಗೆ ಬರಬೇಕು; ಖಾಲೀ ಮನೆ ನೋಡಿ ಬೇಸ್ತು ಬೀಳಬೇಕು; ಪಾಠ ಕಲಿಯಬೇಕು! ಎಂತಹ ಯೋಚನೆ! ಹೇಗೆ ತಟ್ಟನೆ ಹೊಳೆಯಿತು!!

ಹೆಣ್ಣಿನ ಮನಸ್ಸೇ ಒಂದು ತರಹೆ. ಕಾರಣವಿಲ್ಲದೆ, ಸಂಬಂಧವಿಲ್ಲದೇ, ಆ ಸಮಯದಲ್ಲಿ ಏನೇನೋ ಯೋಚನೆಗಳು ಬರುತ್ತವೆ.

ಸಿಟ್ಟಿಗೂ, ಬೇಜಾರಿಗೂ, ಸಂತೋಷಕ್ಕೂ ಕಾರಣವೇ ಬೇಡ. ಅವು ಬರಲೂ ತಡವಿಲ್ಲ; ಹೋಗಲೂ ತಡವಿಲ್ಲ.

ತವರು ಮನೆಗೆ ಹೋಗಬೇಕೆಂಬ ಯೋಚನೆ ಬಂದೊಡನೆ ಮನಸ್ಸಿಗೆ ಒಂದು ಕ್ಷಣ ಹಿತವಾಯಿತು. ಮರುಕ್ಷಣದಲ್ಲಿ ಮನಸ್ಸಿನ ದಾರಿ ಬೇರೆ ಕಡೆ ತಿರುಗಿತು. ಅವರು ಬಂದೊಡನೆ ತನ್ನ ಹೆಸರು ಹಿಡಿದು ಕೂಗಿ ಲಲ್ಲೆ ಮಾಡುವುದು, ಅದರ ಸುಖಾನುಭವವನ್ನು ನೆನೆದು ಕೂಡಲೇ ಹಿಂಜರಿಯಿತು. ಜತೆಗೆ ತಾನಿಲ್ಲದಾಗ ಅವರ ನಡೆನುಡಿ, ಹಾವಭಾವ, ಮನಸ್ಸು ಹೇಗಿರುತ್ತೆಂಬುದನ್ನು ನೋಡ ಬೇಕೆನ್ನಿಸಿತು.

ಅಷ್ಟರಲ್ಲೇ ದೂರದಿಂದ ಅವರ ಮೋಟಾರ್ ಸೈಕಲ್ ಶಬ್ದ ಕೇಳಿಸಿತು. ಹೋ. ಬಂದೇ ಬಿಟ್ಟರು. ಅವಳ ಕಟ್ಟಕಡೆಯ ಯೋಚನೆ ಕಾರ್ಯರೂಪಕ್ಕೆ ಇಳಿಯಬೇಕಿತ್ತು. ಕೂಡಲೇ ಅವಳು ಒಂದು ಕಾಗದದ ಚೂರನ್ನು ತೆಗೆದುಕೊಂಡು, ತನಗೆ ಬೇಜಾರಾ ದುದರಿಂದ ತಾನು ತವರುಮನೆಗೆ ಹೋಗಿರುವುದಾಗಿ ಬರೆದು ಕನ್ನಡಿಯನ್ನು ತೂಗುಹಾಕುವ ಮೊಳೆಗೆ ಸಿಗಿಸಿದಳು. ಏಕೆಂದರೆ ಅವರು ಬಂದೊಡನೆಯೇ ಕನ್ನಡಿಯನ್ನು ನೋಡಿಕೊಳ್ಳುವ ಪದ್ಧತಿ.

ಅವರು ಬಾಗಿಲ ಹತ್ತಿರ ಬಂದೇ ಬಿಟ್ಟರು! ತಾನು ರೂಮಿನ ಹೊರಗೆ ಹೋಗಲೂ ಸಮಯವಿಲ್ಲ. ಮೇಲಾಗಿ, ತಾನು ಬೇರೆ ಕಡೆಗೆ ಹೋದರೆ ತಾನಿಲ್ಲದಿರುವಾಗ ಅವರು ತನ್ನ ಕಾಗದವನ್ನು ನೋಡಿ ಹೇಗೆ ವರ್ತಿಸುವರೆಂಬುದನ್ನು ನೋಡಲು ಹೇಗೆತಾನೆ ಸಾಧ್ಯ? ತಾನಿಲ್ಲದಿರುವಿಕೆಯು ಅವರ ಮೇಲೆ ಏನು ಪರಿಣಾಮ ವನ್ನು ಮಾಡೀತೆಂಬುದನ್ನು ತಿಳಿಯುವುದು ಹೇಗೆ? ಥಟ್ಟನೆ ಮಂಚದ ಅಡಿಗೆ ನುಸುಳಿದಳು. ಹಾಳುಮಂಚ! ಎಷ್ಟು ತಗ್ಗು! ಸ್ಪ್ರಿಂಗುಗಳು ಬೆನ್ನಿಗೇ ತಾಗುತ್ತಿವೆ!

# ಅವಳ ಮನಸ್ಸು

ಅವರು, "ತುಮನೇ ಮುಝುಕೋ . . . . . ." ಎಂತ ಗೊಣಗುತ್ತ ರೂಮಿನೊಳಕ್ಕೆ ಬಂದರು. ಅವರ ಮೊಣಕಾಲು, ಕೆಳಭಾಗದ ಇಜಾರ ಮತ್ತು ಬೂಟುಗಳು ಮಾತ್ರ ಕಾಣುವವೇ ಹೊರತು ಮುಖ ಕಾಣುವಂತಿಲ್ಲ. ಮನಸ್ಸಿನಲ್ಲಿ ಮಂಚವನ್ನು ಬೈದಳು. ಕಾಗದವನ್ನು ಅವರು ಹರಿದಶಬ್ದ ಕೇಳಿಸಿತು. ಬಹುಶಃ ಅವರು ತನ್ನ ಕಾಗದವನ್ನು ಓದಿ ಸಿಟ್ಟಿನಿಂದ ಹರಿದುಹಾಕಿರಬಹುದು ಎಂದುಕೊಂಡಳು. ಅವರ ಮುಖವನ್ನು ನೋಡೋಣವೆಂದು ಸ್ವಲ್ಪ ಮುಂದಕ್ಕೆ ಜರುಗಬೇಕೆನಿಸಿತು. ತುಂಟ ಮನಸ್ಸು. ಅಷ್ಟ ರಲ್ಲಿಯೇ ಅವರ ಕಾಲುಗಳು ಮಂಚದ ಬಳಿ ಬರುತ್ತಿರುವುದು ಕಾಣಿಸಿತು. ಎಚ್ಚರಿಕೆಯಿಂದ ಅಲುಗಾಡದೆ ಅಲ್ಲಿಯೇ ಮುದುಡಿ ಕೊಂಡಳು. ಗಟ್ಟಿಯಾಗಿ ಉಸಿರು ಕೂಡ ಬಿಡುವಂತಿಲ್ಲ. ಅವರು ಮಂಚದ ಮೇಲೆ ಧೊಪ್ಪನೆ ಕುಳಿತುಕೊಳ್ಳಬೇಕೆ! ಮಂಚವು ಜಗ್ಗಿತು. ಎಲ್ಲ ಭಾರ ತನ್ನಮೇಲೆ ಬಿದ್ದಂತಾಯಿತು. ಮೆತ್ತಗೆ ಇವಳು ಕಾಲುನೀಡಿ ಸಾಷ್ಟಾಂಗ ಮಾಡಿದಳು ಅಲ್ಲಿಯೇ. ಅವರು ಎದ್ದರು. ಗೊರ್ ಎಂದು ಶಬ್ದಮಾಡಿದಂತಾಯಿತು. ಮಂಚದ ಸ್ಪ್ರಿಂಗ್. ಅವರು ಅಲ್ಲಿಂದ ಮುಂದೆ ಹೋಗಿ ಕನ್ನಡಿಯ ಮುಂದೆ ನಿಂತರು. ಏನೋ ಯೋಚಿಸುತ್ತಿರಬೇಕು. ಎಚ್ಚರಿಕೆಯಿಂದ ಮುಂದೆ ಜರುಗಿಕೊಂಡು ಹಣಕಿ ಹಾಕಿದಳು. ಎಷ್ಟು ಚಪಲ, ಮನಸ್ಸು! ಕನ್ನಡಿ ಮುಂದೆ ಅವರು ನಿಂತಿದಾರೆ. ತಲೆಗೂದಲನ್ನೂ ಕೋಟನ್ನೂ ಬ್ರಷ್ ಮಾಡಿಕೊಳ್ಳುತ್ತಿದ್ದಾರೆ. ತಾನು ಸಿಗಸಿದ ಕಾಗದ ಮಾತ್ರ ಅಲ್ಲೇ ನೇತಾಡುತ್ತಿದೆ. ಅವರು ಸಿಳ್ಳುಹಾಕುತ್ತಾ ರೂಮಿನ ಹೊರಕ್ಕೆ ಹೊರಟರು. "ಬೈರಾ, ಮನೆಕಡೆ ಜೋಕೆ. ಕ್ಲಬ್ಬಿಗೆ ಹೋಗಿ ಬರುತ್ತೇನೆ" ಎಂದು ಕೂಗಿದುದೂ, ಹೊರ ಬಾಗಿಲು ಧಡಾರೆಂದು ಹಾಕಲ್ಪಟ್ಟುದೂ ಅವಳಿಗೆ ಕೇಳಿಸಿತು.

ಈಗ ಅವಳಿಗೆ ನಿಜವಾಗಿಯೂ ಅಳುವಂತಾಯಿತು. ಕಣ್ಣು ಕೆಂಪಾಗಿತ್ತು. ತಾನಿಲ್ಲದಿದ್ದರೂ ಅವರು ಬೇಸರಪಡಲಿಲ್ಲ.

ಖುಷಿಯಲ್ಲಿ ಸಿಳ್ಳುಹಾಕುತ್ತಾ ನಡೆದರಲ್ಲಾ ಕ್ಲಬ್ಬಿನಕಡೆಗೆ. ನಿಜ ವಾಗಿಯೂ ಅವರಿಗೆ ತನ್ನ ಮೇಲೆ ಪ್ರೇಮವಿಲ್ಲ ಎಂಬ ನಿರ್ಧಾರಕ್ಕೆ ಬಂದಳು. ಪುರುಷವರ್ಗದ ಮೇಲೇ ರೋಷಬಂದಿತು. ಭಾರವಾದ ಮನಸ್ಸಿನಿಂದ ಆವಳು ಮಂಚದಡಿಯಿಂದ ತೆವಳಿಕೊಂಡು ಮೇಲೆ ಎದ್ದಳು. ಹರಡಿದ್ದ ತಲೆಗೂದಲನ್ನು ತಾನರಿಯದಂತೆಯೇ ಒರಸಿ ಕೊಳ್ಳುತ್ತಾ ಕನ್ನಡಿಯ ಬಳಿ ಬಂದಳು. ಅದರ ಮೇಲೆ ತೂಗಾಡು ತ್ತಿದ್ದ ಕಾಗದದಲ್ಲಿ ಕೆಂಪು ಅಕ್ಷರಗಳು ಕಾಣಬಂದುವು. ತಾನು ಬರೆದಿದ್ದುದು ಸೀಸದಕಡ್ಡಿಯಲ್ಲಿ. ಅವರು ಏನೋ ಬರೆದಿದಾರೆಂದು ಕುತೂಹಲದಿಂದ ತೆಗೆದು ಓದಿದಳು,—"ಸಾ . . ! ಮಂಚದಡಿಗಿಂತ ಮಂಚದಮೇಲೆ ಸುಖವಾಗಿರುತ್ತೆ ಕಣೇ"—ಎಂದಿತ್ತು. ಕಾಗದದ ಹಿಂದುಗಡೆ ಮೊಳೆಯ ಮೇಲೆ ಭಂಗಾರದ ಎರಡು ಬಳೆಗಳು ಜೋತಾಡುತ್ತಿದ್ದುವು.

ಮನಸ್ಸಿನ ಒಂದು ಭಾರ ಇಳಿದಂತಾಯಿತು. ಅವರದು ಚಿನ್ನದಂತಹ ಮನಸ್ಸು ಎಂದುಕೊಂಡಳು. ಆನಂದವಾದರೂ, "ಅವರು ಬಂದು ಹಾಗೇ ಹೋದರಲ್ಲ; ಕಾಫೀ ಕುಡಿಯಲಿಲ್ಲವಲ್ಲ" ಎಂದು ಮನಸ್ಸು ಕೊರೆಯತೊಡಗಿತು.

. . . . . .

# ನಟಿ

'ಕಮೂ, ನೀನು ಕೆಸರಿನೊಳಗಿನ ಕಮಲ' ಎಂದು ಹೇಳುತ್ತ ಅವನು ನನ್ನ ಮುಂಗುರುಳನ್ನು ಸೇವರಿಸುತ್ತಿದ್ದನು. ಆ ಒಂದು ಘಳಿಗೆಯಲ್ಲಿ, ಜಗತ್ತಿನಲ್ಲಿ ಇರಬಹುದಾದ ಎಲ್ಲಾ ಸುಖಗಳ ಅನುಭವವವೂ ನನಗೆ ಆಗುತ್ತಿತ್ತು. ಅವನು ನನ್ನ ಮನೆಗೆ ದಿನವೂ ಬರುತ್ತಿದ್ದನು. ಆದರೆ ಆತನು ಇತರರಂತಲ್ಲ! ಕಳೆದ ಆರು ತಿಂಗಳಿಂದ ಅವನ ಸಹವಾಸದಲ್ಲಿ ನನಗೆ ಕಂಡುಬಂದುದೆಂದರೆ ಅವನ ಒಂದು ವಿಚಿತ್ರ ಸಹನೆ. ಅವನಿಗೆ ಬೇಕಾದುದು ನನ್ನ ಜತೆ, ನನ್ನ ಮಾತು, ನನ್ನ ಸಂಗೀತ ಅಷ್ಟೆ. ನನ್ನೊಡನೆ ಅವನ ಪ್ರತಿಯೊಂದು ನಡತೆಯೂ ನಿರ್ವಿಕಾರವಾಗಿರುತ್ತಿತ್ತು. ನನಗೂ ಸಹ ಅವನ ಸಹವಾಸದಲ್ಲಿ ಒಂದು ವಿಧವಾದ ಸುಖ ಶಾಂತಿ ಇರುತ್ತಿತ್ತು. ನನ್ನಲ್ಲಿಗೆ ಬರುತ್ತಿದ್ದ ಇತರರು ಇವನೂ ತಮ್ಮಂತೆ ಒಬ್ಬ ಎಂದು ಕೊಳ್ಳುತ್ತಿದ್ದರು ಕೆಲ ಸಭ್ಯ ಗೃಹಸ್ಥರು ಇವನೊಬ್ಬ ಲಂಪಟ ಎಂದೂ ಹೇಳುತ್ತಿದ್ದರು. ಇದನ್ನು ಕೇಳಿದಾಗ ನನಗೆ ತುಂಬಾ ವ್ಯಸನವಾಗುತ್ತಿತ್ತು. ಜಗತ್ತಿನ ದೃಷ್ಟಿಯಲ್ಲಿ ನಾನೊಬ್ಬಳು ನಟಿ. ಈ ಎರಡಕ್ಷರವನ್ನು ಕೇಳಿದರೆ, ಹಾದಿಯಲ್ಲಿ ಹಾವನ್ನು ಕಂಡರೆ ಸಿಡಿದು ಹಾರುವಂತೆ ಹಾರಿ ಬೀಳುವವರೂ ಇರಬಹುದು. ಆದರೆ ಅವರಲ್ಲಿ ಎಷ್ಟು ಜನ ನನ್ನನ್ನೂ, ನನ್ನ ಮನಸ್ಸನ್ನೂ, ನನ್ನ ವಿಚಾರ ಗಳನ್ನೂ ತಿಳಿದುಕೊಂಡವರು ಇರುವರು! ಅವನು ಮಾತ್ರ ನನ್ನನ್ನು ಚೆನ್ನಾಗಿ ಅರಿತಿದ್ದನೆಂದು ಎಣಿಸಿದ್ದೆನು.

ಆದರೆ ಹೀಗಾಗಬಹುದೆಂದು ನಾನು ತಿಳಿದಿರಲಿಲ್ಲ. ಕೆಸರು ಕೆಸರೇ! ಕಮಲವು ಕಮಲವೆ!! ಇವನೂ ಹೀಗೆ ನಡೆದುಕೊಳ್ಳುವ ನೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ!

ಆ ದಿನ ಅವನು ಬೆಳಗಿನ ಒಂಭತ್ತುಗಂಟೆಗೇ ಮನೆಗೆ ಬಂದನು. ನನಗೆ ಸ್ವಲ್ಪ ಆಶ್ಚರ್ಯವಾಯಿತು. ಎಂದೂ ಬೆಳಗಿನಹೊತ್ತಿನಲ್ಲಿ ಅವನು ನಮ್ಮ ಮನೆಗೆ ಬಂದಿರಲಿಲ್ಲ. ನಾನು ಆಗತಾನೆ ಸ್ನಾನಮಾಡಿ ಒಳಗೆ ಬರುತ್ತಿದ್ದೆ. ಆಗಲೇ ಆತನು 'ಕಮಾ' ಎಂದು ಕರೆಯುತ್ತಾ ಒಳಗೆ ಬಂದೇ ಬಿಟ್ಟನು. ನನ್ನನ್ನು ನೋಡಿ 'ಓಹೋ' ಎನ್ನುತ್ತ ಪಕ್ಕದ ರೂಮಿಗೆ ಹೋದನು. ನಾನು ನನ್ನ ರೂಮಿಗೆ ಹೋಗಿ ಬೇರೆ ಸೀರೆಯನ್ನು ಉಟ್ಟು ಮುಡಿಯನ್ನು ಕಟ್ಟಿಕೊಂಡು ಅವನಿದ್ದ ರೂಮಿಗೆ ಬಂದೆನು. "ಏನು ಈ ದಿನ ತೀರ ಹೊಸ ಪರಿ! ಬೆಳಗಾಗುವುದರೊಳಗಾಗಿ ಬಂದಿದ್ದೀರಿ?" ಎಂದೆನು.

"ಏನೊ, ಸುಮ್ಮನೆ ಹೀಗೆ. ಮನಸ್ಸಿಗೆ ಸ್ವಲ್ಪ ನೆಮ್ಮದಿ ಇಲ್ಲ ಕಮಾ, ಅದಕ್ಕೆ"

"ಅಷ್ಟೆ. ಸರಿಯಲ್ಲ!" ಎಂದು ನಾನು ಹೊರಡುವುದರಲ್ಲಿ ಇದ್ದೆನು. ಆಗ ಅವನು ತಟ್ಟನೆ ಎದ್ದು, "ಎಲ್ಲಿ ಹೊರಟೆಯಲ್ಲ ಕಮೂ" ಎಂದನು.

"ಮೊದಲು ಕಾಫಿ ಆಗಲಿ. ಕಾಫಿಗೆ ಹೇಳಿ ಕಳಿಸುತ್ತೇನೆ"

"ಬೇಡವೆ, ನನಗೆ ಕಾಫಿ ಆಗಿದೆ. ನಿನಗೆ ಆಗಿಲ್ಲ ಎಂತ ಕಾಣುತ್ತದೆ. ಹೋಗು ಹೋಗು" ಎಂದನು.

ನಾನು ಹೊರಗೆ ಹೊರಡುವುದರಲ್ಲಿದ್ದೆನು. ಅಷ್ಟರಲ್ಲಿ ಹೊರ ಬಾಗಿಲನ್ನು ಯಾರೋ ತಟ್ಟಿದಂತಾಯಿತು. ಅವನು ಪುನಃ ಥಟ್ಟನೆ ಎದ್ದು ನಿಂತು ನನ್ನ ಮುಖವನ್ನೇ ನೋಡಿದನು. ನನಗೂ ಆಶ್ಚರ್ಯವಾಯಿತು. ಬಾಗಿಲನ್ನು ತಟ್ಟಿದ ಶಬ್ದವನ್ನು ಕೇಳಿಯಲ್ಲ; ಅವನ ಇಂದಿನ ರೀತಿಯನ್ನು ನೋಡಿ!

"ಹಾಲಿನವನಿರಬಹುದು, ಅಥವಾ ಅಂಚೆಯವನಿರಬಹುದು. ಇಷ್ಟು ಹೊತ್ತಿನಲ್ಲಿ ಯಾರು ಬರುವರು?" ಎಂದೆನು.

"ನೋಡು, ಇಗೋ, ಈ ಬಾಗಿಲನ್ನು ಹಾಕಿಕೊಂಡು ಹೋಗು. ಜಾಗ್ರತೆ ಬರುತ್ತೀ ತಾನೆ?" ಅವನು ಖುರ್ಚಿಯ ಮೇಲೆ ಕುಳಿತುಕೊಳ್ಳುತ್ತ ನಿಧಾನವಾಗಿ ಹೇಳಿದನು.

ನಾನು ರೂಮಿನಿಂದ ಹೊರಗೆ ಬಂದು ಬಾಗಿಲನ್ನು ಹಾಕಲು ಹಿಂತಿರುಗಿದಾಗ ಅವನು ಜೇಬಿನಿಂದ ಕರವಸ್ತ್ರವನ್ನು ತೆಗೆದು ಮುಖ ಒರೆಸಿಕೊಳ್ಳುತ್ತಿದ್ದನು.

ನಾನೂ ಸಹ ಹಾಲಿನವನೇ ಇರಬೇಕು ಎಂದುಕೊಂಡಿದ್ದೆ. ಆದರೆ ಬಾಗಿಲನ್ನು ತೆಗೆದೊಡನೆಯೇ ನನಗೆ ಕಂಡವಳು ಒಬ್ಬಳು ಅಪರಿಚಿತ ಹೆಂಗಸು. ನನ್ನಷ್ಟೆ ವಯಸ್ಸಿರಬಹುದು. ನೋಡಲೂ ಲಕ್ಷಣವಾಗಿದ್ದಳು. ಮುಖದಲ್ಲಿ ತುಂಬಾ ಕಳವಳ ತೋರುತ್ತಿತ್ತು. ಎಲ್ಲೋ ದಾರಿ ತಪ್ಪಿ ಬಂದಿರಬಹುದು ಎಂದುಕೊಂಡು ನಾನು "ಏನಮ್ಮ, ಏನು ಬೇಕು" ಎಂದು ಕೇಳಿದೆ. ಅವಳು ಏನೂ ಹೇಳದೆ ನೇರವಾಗಿ ಒಳಗೇ ಬಂದಳು. ಇದನ್ನು ನೋಡಿ ನನಗೆ ಆಶ್ಚರ್ಯವಾಯಿತು. ನಾನು ಪುನಃ ಮೊದಲಿನ ಪ್ರಶ್ನೆಯನ್ನೇ ಕೇಳಿದೆನು. ಅವಳು ಮಾತೇ ಆಡದೆ ಮೂಕಿಯಂತೆ ಅತ್ತಿತ್ತ ನೋಡಿದಳು. ಪುನಃ ಬಿರುಗಣ್ಣಿನಿಂದ ನನ್ನನ್ನೆ ದಿಟ್ಟಿಸಿದಳು. ಆ ದೊಡ್ಡ ಹಾಲಿ (Hall) ನಲ್ಲಿ ನಾವಿಬ್ಬರು ಪರಸ್ಪರ ಅಪರಿಚಿತರು ಎದುರು ಬದುರು ನಿಂತು ಮೌನವಾಗಿ ಒಬ್ಬರನ್ನೊಬ್ಬರು ದಿಟ್ಟಿಸುವುದನ್ನು ನೋಡಿ ನನಗೇಕೋ ನಗು ಸ್ವಲ್ಪ ಬಂತು. ನನ್ನ ನಗುವಿನಿಂದ ಅವಳೂ ನಗಬೇಕಿತ್ತು. ಆದರೆ ಅವಳ ಮುಖಭಾವವು ಬದಲಾಯಿಸಲಿಲ್ಲ. ಅವಳು ಪಕ್ಕದ ರೂಮಿನ ಕಡೆಗೇ ನೋಡುತ್ತಲಿದ್ದುದನ್ನು ನೋಡಿ ನಾನು ನಿಧಾನವಾಗಿ ಕೋಣೆಯ ಬಾಗಿಲಿಗೂ ಅವಳಿಗೂ ಮಧ್ಯೆ ಬಂದು ನಿಂತು 'ಏನಮ್ಮ' ಎಂದು ಪುನಃ ಕೇಳಿದೆನು.. ಅವಳು ನನ್ನನ್ನೇ ದಿಟ್ಟಿಸಿ ನೋಡುತ್ತ ನಡುಗುವ

ದನಿಯಿಂದ "ಅವರು ಇಲ್ಲಿಗೆ ಬಂದಿದ್ದಾರಂತೆ" ಎಂದಳು.

"ಅವರು ಎಂದರೆ ಯಾರಮ್ಮ?"

ಕೇಳಿದ್ದೇನೋ ಕೇಳಿ ಬಿಟ್ಟೆ. ಆದರೆ ತಟ್ಟನೆ ಅರಿವು ಬಂದು ನನ್ನ ದಡ್ಡತನಕ್ಕೆ ನನಗೇ ನಾಚಿಕೆಯಾಯಿತು. ಮರುಕ್ಷಣದಲ್ಲಿಯೇ ಅವನ ನೆನಪಾಗಿ ಏನು ಮಾಡಲೂ ತೋಚದಂತಾಯಿತು. ಇವಳು ಅವನ . . . . ಹೆಂಡತಿ . . . . . ಹಾಗಿದ್ದರೆ . . . . . , ಏನೇನೋ ಹೇಳಲಸಾಧ್ಯವಾದಷ್ಟು ವಿಚಾರಗಳು ತಲೆಯನ್ನು ಒಮ್ಮೆಗೇ ತುಂಬಿದುವು. ಆದರೂ ಸುದಾರಿಸಿಕೊಂಡು "ಇಲ್ಲಮ್ಮ, ಇಲ್ಲಿಗೆ ಯಾರೂ ಬಂದಿಲ್ಲ" ಎಂದೆನು.

"ಬಂದಿಲ್ಲವೆ? ನಿಜಕ್ಕೂ? ನನಗೆ ನಂಬಿಕೆಯಾಗದು. ನನ್ನ ತಮ್ಮ ತನ್ನ ಎರಡೂ ಕಣ್ಣುಗಳಿಂದ ಕಂಡಿದ್ದಾನೆ."

"ಇಲ್ಲಮ್ಮ ತಾಯಿ, ಇಲ್ಲಿ ಯಾರೂ ಬಂದಿಲ್ಲ. ನಿಮ್ಮ ತಮ್ಮ ಯಾರನ್ನು ಕಂಡನೋ, ಎಲ್ಲಿ ಕಂಡನೋ. ಅಂತೂ ಇಲ್ಲಿ ಯಾರೂ ಇಲ್ಲ."

ಅವಳ ಕಣ್ಣುಗಳು ಕೆಂಪಾದವು. ತುಟಿಗಳು ನಡುಗತೊಡಗಿದುವು. ಅವನ್ನು ಕಂಡು ನನಗೆ ಅಂಜಿಕೆಯಾಯ್ತು.

"ನಿನಗೆ ಗೊತ್ತಿಲ್ಲವೇ? ಯಾರೂ ಬಂದಿಲ್ಲವೆ? ಸುಳ್ಳು ಹೇಳುವೆ. ಎಷ್ಟಾದರೂ ನಟಿ. ಸೂಳೆಯ ಜಾತಿ. ಸುಳ್ಳು ಹುಟ್ಟಿನೊಡನೇ ಬಂದಿರುತ್ತೆ. ನಿಜದ ಪರಿವೆ ನಿಮಗೆಲ್ಲಿ?" ಅವಳು ಬಿರುಸಾಗಿ ನುಡಿದಳು.

ಪ್ರತಿಸ್ಪರ್ಧಿಯ ಆಯಕಟ್ಟನ್ನು ಹಿಡಿಯಬೇಕೆಂದು ಜಟ್ಟಿಯು ಎಚ್ಚರಿಕೆಯಿಂದಿಡುವ ಧೈರ್ಯದ ಭರವಸೆಯ ಹೆಜ್ಜೆಯ ಗತ್ತಿನಂತೆ ಇತ್ತು ಅವಳ ಮಾತಿನ ಪ್ರತಿಯೊಂದು ಶಬ್ದ!

ಅವಳ ಮಾತುಗಳನ್ನು ಕೇಳಿ ಆಗ ನನಗಾದ ಅನುಭವವನ್ನು ಹೇಳಲೇಬಾರದು. ನನ್ನ ಸರ್ವಶಕ್ತಿಯೂ ಕುಂದಿಹೋಯಿತು. ಭೂಮಿಗೇ ಕುಸಿದು ಹೋದೆ. "ನಟಿ! ಸೂಳೆ! ಅದು ನನ್ನ

ತಪ್ಪೆ? ಯಾರಾದರೊಬ್ಬರು ಲಗ್ನವಾಗಿದ್ದರೆ ನಾನೂ ನಿನ್ನಂತೆಯೇ ಇರುತ್ತಿರಲಿಲ್ಲವೇ?" ಈ ಮಾತು ಯೋಚನೆಯಾಗಿ ತಲೆಯಲ್ಲಿ ಉಳಿಯಿತೇ ಹೊರತು ನುಡಿಯಾಗಿ ಬಾಯಿಂದ ಹೊರಬೀಳಲಿಲ್ಲ. ಗಂಟಲು, ಬಾಯಿ, ಆರಿಹೋಗಿತ್ತು !

"ನಿನ್ನ ನೀಚತನಕ್ಕೆ ಮಿತಿ ಇದೆಯೆ? ಅವರನ್ನೂ, ನಮ್ಮನ್ನೂ ನಮ್ಮ ಸರ್ವಸ್ವವನ್ನೂ ಹಾಳುಮಾಡಿಬಿಟ್ಟೆ. ಮನೆ ಮುರುಕೀ, ಬೆಳ್ಳಿ ಹೋಯಿತು ! ಬಂಗಾರ ಹೋಯಿತು !! ಮಾನ ಮರ್ಯಾದೆ ಎಂದೋ ಹೋಯಿತು. ಇದಿಷ್ಟೂ ಸಾಲದೆ ಈಗ ಅವರನ್ನು ಜೇಲಿಗೂ ಕಳಿಸಲು ತಯಾರಾಗಿರುವೆ. ದೇವರೇ ದೇವರೇ" ಎಂದು ಹೇಳುತ್ತ ಅವಳು ಕಂಬನಿ ತುಂಬಿ ಕುಸಿದು ಕುಳಿತಳು.

ನಾನು ನಿದಾನವಾಗಿ ಚೇತರಿಸಿಕೊಳ್ಳುತ್ತ "ಯಾರನ್ನಮ್ಮ? ಯಾರು ಯಾರನ್ನು ಜೇಲಿಗೆ ಕಳಿಸುವುದು? ಸರಿಯಾಗಿ ಹೇಳಮ್ಮ" ಎಂದೆನು.

"ಯಾರನ್ನಂತೆ ! ಅಯ್ಯೊ, ಇದೆಲ್ಲ ನಿನಗಾಗಿ ಅಲ್ಲವೆ? ಇದ್ದ ಬಿದ್ದ ಬೆಳ್ಳಿ ಭಂಗಾರಗಳನ್ನೆಲ್ಲ ನಿನ್ನ ಬಾಯಿಗೆ ಸುರಿದುದೂ ಸಾಲದೆ? ನಿನಗಾಗಿ ಅವರನ್ನು ಕಳ್ಳರನ್ನಾಗಿ ಮಾಡಿದೆಯಲ್ಲ. ಏನು ಗತಿ ಈಗ?"

ನಾನು ಮಾತನಾಡಲಿಲ್ಲ.

"ಏನು ಮಾಡಲಿ; ಒಂದೇ, ಎರಡೇ, ಸಾವಿರ ರೂಪಾಯಿಗಳಂತೆ, ಎಲ್ಲಿಂದ ಕೂಡಿಸಲಿ. ಹೇಗೆ ತರಲಿ. ಯಾವ ಗಳಿಗೆಯಲ್ಲಿ ಪೋಲೀಸರು ಬರುವರೊ. ನಮ್ಮ ಮಕ್ಕಳ ಗತಿ ಏನು? ಸರ್ವಸ್ವವೂ ಹಾಳಾಯಿತು"

"ಸಾವಿರ ರೂಪಾಯಿ !" ನನಗೆ ತಿಳಿಯದಂತೆಯೇ ನಾನು ನುಡಿದು ಬಿಟ್ಟೆ.

"ಹುಂ. ಸಾವಿರ ರೂಪಾಯಿ. ಎಲ್ಲಮ್ಮ! ನಿನಗೆ ಸ್ವಲ್ಪವೂ ಕನಿಕರವಿಲ್ಲವೇನಮ್ಮ. ನಿನ್ನ ಕಾಲಿಗೆ ಬೀಳುವೆ. ಅವರನ್ನು ಉಳಿಸು. ಮಕ್ಕಳು ಮರಿಗಳ ಪಾಡನ್ನಾದರೂ ನೆನೆದು ರೂಪಾಯಿಗಳನ್ನು

ಕೊಡು" ಎನ್ನುತ್ತ ಅವಳು ಥಟ್ಟನೆ ಎದ್ದು ನನ್ನ ಕಾಲನ್ನು ಹಿಡಿಯಲು ಬಂದಳು. ನಾನು ಸರಕ್ಕನೆ ಹಿಂಜರಿದು ಗೋಡೆಗೆ ಒರಗಿ ನಿಂತೆನು. ವಸ್ತುತಃ ನನಗೆ ಏನುಮಾಡಲೂ ತೋಚಲಿಲ್ಲ. ಏನು ನುಡಿಯುತ್ತಿದೇನೆಂಬುದರ ಪರಿವೆಯೂ ಇಲ್ಲದೆ, "ಇಲ್ಲಮ್ಮ ಇದೋ, ಇದೊಂದು ಉಂಗುರಮಾತ್ರವಲ್ಲದೆ ಅವರು ನನಗೆ ಏನನ್ನೂ ಕೊಡಲಿಲ್ಲ. ಇದೊಂದೇ" ಎಂದೆನು. ಅವಳು ಹಸಿದ ಕಣ್ಣು ಗಳಿಂದ ಅದನ್ನು ನೋಡುತ್ತ "ಸುಳ್ಳು ಸುಳ್ಳು ಚೈನು, ಬಳೆ, ಡಾಬು ಇವೆಲ್ಲ ಎಲ್ಲಿ? ಎಲ್ಲ ನಿನ್ನಲ್ಲೇ ಇದೆ. ನೀನು ಸುಳ್ಳು ಹೇಳುತ್ತಿರುವೆ" ಎಂದು ಕೂಗಿದಳು. ನಾನು ಕೂಡಲೇ ನನ್ನ ರೂಮಿಗೆ ಓಡಿಹೋಗಿ ನನ್ನ ಪೆಟ್ಟಿಗೆಯನ್ನು ತಂದು ಆವಳ ಮುಂದೆ ತೆರೆದು "ನೋಡಮ್ಮ, ಇವುಗಳಲ್ಲಿ ಯಾವುದೂ ಅವರು ಕೊಟ್ಟು ದಲ್ಲ. ಇದೊಂದೇ ಉಂಗುರ. ಅದನ್ನು ಬೇಕಾದರೆ ತೆಗೆದುಕೊ" ಎಂದು ಹೇಳುತ್ತ ಉಂಗುರವನ್ನು ತೆಗೆದೆನು.

"ಅಯ್ಯೋ, ಉಂಗುರವಂತೆ! ಅದೊಂದು ಉಂಗುರದಿಂದ ಸಾವಿರ ರೂಪಾಯಿ ಕೂಡಿಸಲು ಸಾಧ್ಯವೆ? ಇನ್ನೇನು ಗತಿ? ನೋಡಮ್ಮ ದಯವಿಟ್ಟು ಏನಾದರೂ ಮಾಡಮ್ಮ. ಅವರನ್ನು ಹೇಗಾದರೂ ಉಳಿಸು" ಅವಳು ಗೊಳೋ ಎಂದು ಅಳಲು ಮೊದಲು ಮಾಡಿದಳು.

ಅವಳ ಅಳುವಿನ ಪ್ರವಾಹದಲ್ಲಿ ನಾನೂ ತೇಲಿಹೋದೆನೇನೊ! ನನ್ನ ಪೆಟ್ಟಿಗೆಯನ್ನು ಅವಳ ಮುಂದೆ ಹಿಡಿದು "ಇವುಗಳಲ್ಲಿ ಯಾವುದು ನಿನ್ನದೋ ಅದನ್ನು ತೆಗೆದುಕೊಂಡು ಹೋಗಮ್ಮ" ಎಂದೆನು. ಅವಳು ನಾಲ್ಕಾರು ಆಭರಣಗಳನ್ನು ತೆಗೆದುಕೊಂಡು ಮರುಮಾತ ನಾಡದೆ ಕಣ್ಣನ್ನು ಒರೆಸಿಕೊಳ್ಳುತ್ತಾ ಹೊರಟುಹೋದಳು. ನಾನು ಕಲ್ಲಿನಂತೆ ನಿಂತುಬಿಟ್ಟೆನು.

ಅವಳು ಹೊರಟುಹೋಗಿ ಒಂದೆರಡು ನಿಮಿಷಗಳಾಗಿರಬಹುದು ಪಕ್ಕದ ರೂಮಿನಿಂದ ಅವನು ಹೊರಗೆ ಬಂದನು. ಅವನನ್ನು ಕಂಡೊಡನೆಯೇ ನನಗೆ ಎಲ್ಲಿಯೂ ಇಲ್ಲದ ಸಿಟ್ಟು ಬಂತು.

"ಏನು, ನೀವು ಕೊಟ್ಟುದುದೇನು? ಅವಳಿಂದ ನಾನು ಎಷ್ಟು ಮಾತು ಕೇಳಬೇಕಾಯ್ತು. ಹೇಳಿ, ನೀವು ನನಗೆ ಎಷ್ಟು ಕೊಟ್ಟಿದ್ದೀರ?" ಎಂದು ಅವನ ಭುಜಗಳನ್ನು ಹಿಡಿದು ಅಲ್ಲಾಡಿಸಿ ಕೇಳಿಬಿಟ್ಟೆನು. ಅವನು ನನ್ನನ್ನು ದುರದುರನೆ ನೋಡುತ್ತ "ಛೀ! ಕೈ ಬಿಡು, ದೂರ ನಿಂತು ಮಾತಾಡು. ಪಾಪಿ, ಅವಳು ನಿನ್ನ ಕಾಲು ಹಿಡಿಯುವಂತಾಯ್ತೆ? ತೊಲಗಾಚೆ" ಎನ್ನುತ್ತಾ ನನ್ನನ್ನು ತಳ್ಳಿ ಹೊರಟುಹೋದನು.

ನಾನು ಅಳಬಾರದೆಂದು ಹಲ್ಲುಗಳನ್ನು ಕಚ್ಚಿಹಿಡಿದರೂ ಅದು ಅದನ್ನೂ ತೂರಿಕೊಂಡು ಬಂದುಬಿಟ್ಟಿತು. ಓಡಿಹೋಗಿ ನನ್ನ ಮಂಚದ ಮೇಲೆ ದೊಪ್ಪನೆ ಬಿದ್ದು ಅತ್ತೆನು. ನನ್ನ ಆಭರಣಗಳನ್ನು ಅವಳಿಗೆ ಕೊಟ್ಟುದುದಕ್ಕಾಗಿ ನನ್ನನ್ನೆ ನಾನು ಬೈದುಕೊಂಡೆನು. ಹಿಂದೊಂದು ದಿನನನ್ನಲ್ಲಿಗೆ ಬಂದಿದ್ದ ನಮ್ಮ ಕಂಪೆನಿಯವನೊಬ್ಬನು ನನ್ನನ್ನು ನಿಷ್ಕಾರಣವಾಗಿ ಹೊಡೆದುದು ನೆನಪಾಗಿ ಅಳು ಇನ್ನೂ ಹೆಚ್ಚಾಗಿ ಬಂದಿತು.

**( ಆಂಟನಿ ಚೆಕಾಫನ ಒಂದು ಕಥೆಯ ಆಧಾರದಿಂದ )**

• • • • • • •

# ಅವರ ಬಾಳು

"ಪುಟಾಣೀ, ಪುಟಾಣಿ"

ಆಗತಾನೆ ಒಳಕ್ಕೆ ಬಂದ ರಂಗನಾಥರಾಯರು ಹೆಂಡತಿಯನ್ನು ಕೂಗಿದರು. "ಪುಟಾಣಿ" ಎಂಬುದು ಅವರು ಹೆಂಡತಿಗೆ ಇಟ್ಟಿದ್ದ ಪ್ರೀತಿಯ ಹೆಸರು. ಹೆಸರಿಗೆ ಕಾರಣವೂ ಇತ್ತು. ಏಕೆಂದರೆ ರಾಮುವಿನ

"ಎತ್ತರ ಬಹು ಅವಳಿಲ್ಲದೊಡೇನು ।
ಕೆತ್ತನೆ ಶಿಲೆಗೆಲಸ ॥

. . . .     . . . .     . . . .     .

ಒಡವೆಯ ಭಾರದಿ ತುಳುಕುವುದಿಲ್ಲ ।
ಆದರೂ ರಾಜಿಪಳು ॥"

—ಎಂಬ ಪದ್ಯವು ಅವಳಿಗೆ ಚೆನ್ನಾಗಿ ಒಪ್ಪುತ್ತಿತ್ತು. ಲಲಿತಮ್ಮ-ರಂಗನಾಥರಾಯರ ಹೆಂಡತಿ—ಹೊರಕ್ಕೆ ಬಂದರು.

"ಕಾಫಿ ಇದೆಯೇನೆ?" ಎನ್ನುತ್ತಾ ರಾಯರು ಬಾಗಿಲ ಕಡೆ ತಿರುಗಿ "ಒಳಗೆ ಬಾರಪ್ಪ" ಎಂದರು.

ಬರುವವರಾರೆಂದು ಲಲಿತಮ್ಮ ಬಾಗಿಲಮರೆಯಲ್ಲಿ ನಿಂತು ನೋಡಿದಳು.

ಒಬ್ಬ ಹುಡುಗ. ಸುಮಾರು ಹದಿನಾಲ್ಕು ವಯಸ್ಸಿರಬಹುದು. ಬಡತನದ ಬೇಗೆಯಿಂದ ಬೆಂದು ಸೀಕರಿಸಿ ಹೋದ ದೇಹ ಆರೆಮುಚ್ಚಿದ ಹರುಕುಬಟ್ಟೆಯಿಂದ ಕಾಣುತ್ತಿತ್ತು. ಎಂಥವರನ್ನೂ ಮರುಕುಗೊಳಿಸುವಂಥ ದೇಹ! ಅದೇನು ರೂಪು!! ಲಲಿತಮ್ಮ ಕಾಫಿ ತಂದರು.

"ನನಗಲ್ಲ . . . . . ಅವನಿಗೆ . . . . . ಕೊತುಕೋ ಅಣ್ಣ" ಎಂದರು ರಾಯರು. ಅಲ್ಲಿಯೇ ಬಾಗಿಲಬಳಿ ಸಂಕೋಚದಿಂದ ಆ ಹುಡುಗ ಕುಳಿತ.

"ನಿನ್ನ ಹೆಸರೇನಪ್ಪ?"

"ಯಂಕ"

"ನಿಮ್ಮೂರು?"

"ನನ್ನೂರು . . . . . ನನ್ನೂರು . . . . . . ಮೊದಲಿಗೆ ನಂಗೆ ನೆಪ್ಪಿಲ್ಲರಿ. ಇಲ್ಲೀಗ್ಬರಾಕಿನ್ನ ಮದ್ಲೆ ನಾನು ಅವ್ವ ಇದ್ದದ್ದು. ನಮ್ಮಟ್ಟಿಂದ ಕವಣೇ ಕಲ್ಲು ಬೀಳೋ ದೂರ್ದಾಗೆ ನಮ್ಮ ಗೌಡ್ರ ಮನೇನ್ರಿ. ಅವ್ವಾ ನಾನೂ ಮುಂಜಾನೆ ಬುತ್ತೀತಿಂದು ಅಲ್ಲಿಗೆಯ್ಯಾಕೆ ಹೋಗ್ತಿದ್ವಿ."

"ನಿಮ್ಮಪ್ಪ ಏನ್ಮಾಡ್ತಿದ್ದ?"

ಯಂಕನು ಉಸಿರನ್ನು ಹಿಡಿದು ಹಿಡಿದು ಬಿಟ್ಟನು; ಮತ್ತು ಕ್ಷಣಕಾಲ ಸುಮ್ಮನಿದ್ದನು.

"ಅ . . . . ಅ . . . . ಅಪ್ಪನ್ನ ಕಾಣಲೇ ಇಲ್ರೀ ನಾನು, ಅವ್ವ ಯಲ್ಲಾರ, ಮಾತಿಗ್ಮೊದ್ಲು ಅವನ್ನ ನೆಪ್ಪು ಮಾಡ್ಕೊಂಡು. ಅಳ್ತಿದ್ಳು. ಅವ್ವ ಅಪ್ಪ ಇದ್ದೂರಿಗೆ, ನಾನು ಹೊಟ್ಟೆ ಒಳಗಿದ್ದಾಗ ದೊಡ್ಡ ಜಡ ಬಂತಂತ್ರಿ. ಅತ್ರಿದ್ದೋರೆಲ್ಲ ಊರ್ಬಿಟ್ಟು ಓದ್ರಂತೆ. ಅವ್ವ ಜಡ್ನ ಬಿದ್ದದ್ದಕ ಅವಳ್ನ ಬಿಟ್ಟು ಹೋಗಾಕಾಗ್ದೂಂತ ಅಪ್ಪ ಅಲ್ಲೇ ಇದ್ದನಂತ್ರಿ. ಅಂಗೆ ಔಸ್ತಿ ಚೀಟಿ ಮಾಡಿದನಂತೆ. ಅವ್ವಗೆ ಭಾಳ ದಿನದ್ಮೇಲೆ ಗುಣ ಆತಂತೆ. ಹಂ, ಗುಣ ಆದದ್ಕಂಡು ಇಬ್ರೂನು ಅಲ್ಲೇ ನಿಂತರಂತೆ. ಒಂದಿನ ಅಪ್ಪ, ಸರೀರಾತ್ರೀಕ ಅಟ್ಟೀಗೆ ಬಂದನಂತೆ, "ಚೆನ್ನೀ, ಯಾಕೋ ಬಲು ಹಿಮ ಆಕೈತಿ" ಅಂತೇಳಿ ಮುದ್ದೆ ತಿನ್ನದೇ, ಅಂಗೇ ಮನಗಿದನಂತೆ. ಆದಿನಾ ಎಲ್ಲ ಮೈ ಬಹಳ ಕಾದ್ವಂತೆ. ಮರುದಿನ ಹೊತಾರೆ ಹೊತ್ತಿಗೆ ಜನ್ಮ ಹೋಗಿತ್ತಂತೆ"

ರಾಯರು ಸುಮ್ಮನೇ ಕುಳಿತಿದ್ದುದನ್ನು ಕಂಡು ಯಂಕನು ಪುನಃ ಹೇಳತೊಡಗಿದನು.

"ಅವ್ವ ಅತ್ತು ಅತ್ತು ಸಾಕಾಗೋದ್ವಂತೆ. ಕೇಳೋರಾರ್‍ರೀ ಆ ಹಳುವಿನಾಗ? ಯಾರನ್ನರಾ ಕರ್‍ಯಾಕ ಹೋಗಾನಾಂದ್ರೂ ಅವರೆಲ್ಲಾ ದೂರಿದ್ರು. ಈಟರಾಗೇ ಅವ್ವಗ ಬ್ಯಾನೆ ತೊಡಗಿತಂತ್ರಿ. ಹೊತ್ತು ಮುಣಗೋದ್ರಾಗ ನನ್ನ ಹಡದಳಂತ್ರಿ. ರಾತ್ರೆಲ್ಲಾ ಒಂದ್ಕಡೆ ಹೆಣ, ಒಂದ್ಕಡೆ ನಾನಂತ್ರಿ; ಅಟ್ಟೇಗ ಬಾಕ್ಲಿಲ್ಲ ಬದ್ರಿಲ್ಲ. ಆ ಮಸಾಣದಾಗ ನಾಯಿನರಿ ನುಗ್ಗಿದ್ರೂ ಕೇಳೋರಿರ್‍ಲಿಲ್ಲ, ಯಂಕಾ, ನಿನ್ನ ಮೂರೀ ನೋಡಿ ಜೀವಹಿಡಕೊಂಡೆ ನಾನು" ಅಂತಿದ್ಲು ಅವ್ವ.

ಯಂಕ ಸ್ವಲ್ಪ ಹೊತ್ತು ಸುಮ್ಮನಿದ್ದನು. ಅವನು ತಾನೀಗ ಇರುವುದೆಲ್ಲಿ ಎಂಬುದನ್ನೆ ಮರೆತಿದ್ದ. ಆ ಹಿಂದಿನ ನೆನಪುಗಳಲ್ಲೇ ಮುಳುಗಿದ್ದನು.

ಮತ್ತೆ ಮಾತು ಮುಂದರಿಸಿದನು :

"ಹೊತಾರೆ ಎದ್ದಾಕೀನ, ಹೊಟ್ಟೆ ಸಂಕಟ ತಡಕೊಂಡು ಗೌಡ್ರ ಮನೀತಾಕ ಹೋದ್ಲಂತೆ. ಅವರು, ಜಡ ಬಡಿದಾಕೆ, ಮನೀ ತಾಕ ಬರಾಕಾಗ್ದು ಅಂತ ಬೈದು ಅಟ್ಟಿ ಬಿಟ್ಟರಂತ್ರಿ. ಏನು ಮಾಡಾಕೂ ಹರೀದೆ, ಅವ್ವ ಅಳ್ತಾ ಕುಂತ್ಲಂತ್ರಿ. ಏಟೊತ್ತು ಅಳಾಕಾದೀತ್ರಿ? ಮುಂಜಾನೆ ಎದ್ದು ಅಟ್ಟೇನೆಲ್ಲಾ ಹುಡುಕಿ ಮುರುಕು ಗುದ್ಲಿ ತೊಗೊಂಡು, ಸೆರಗಿನಾಗ ನನ್ನ ಕಟ್ಕೊಂಡು ಕೆರೀ ಕೋಡೀಗೆ ಹೋದ್ಲಂತೆ. ಅಲ್ಲಿ ಒಂದು ನೆಳ್ಳಿರೋ ಮಟ್ಟೀ ಬುಡ್ದಾಗ ನನ್ನ ಉಲ್ಸಾಕಿ, ಮೊಳಕಾಲ್ಮಟ್ಟ ಒಂದ್ಗುಂಡಿ ತೋಡಿದ್ಲಂತ್ರಿ. ಸಾಕ್ಸಾಕಾಗಿ ಮನೀಕ ಬರೋ ಹೊತ್ತಿಗೆ, ಹೊತ್ತು ಮ್ಯಾಲಕ ಬಂದಿತ್ತಂತೆ. ಈಟು ನೀರ್ಕುಡ್ದು ಮಗ್ಲಟ್ಟೀ ಹುಡುಗ್ರು ಆಡಾಕ್ಮಾಡಿದ್ವಂಡೀ ತಂದ್ಲಂತೆ. ಅದ್ರಾಗ ಅಪ್ಪನ್ನ ಯಂಗೋ ಒತ್ತು ತಂದು ಅದರಾಗ ಮನಗ್ಸಿದ್ಲಂತ್ರಿ. ಆವಸ

ದೋತ್ರಾನೆಲ್ಲಾ ಅರ್ದು, ಎಣ ಉಲ್ದಾಡ್ದಂಗ ಕಟ್ಟಿದ್ಲಂತ್ರಿ. ಈಟೆಲ್ಲ ಆತು, ನನ್ನ ಏನ್ಮಾಡೋದು ಅಂತೇಳಿ, ನಿಲ್ದೇ . . . . . ಅಂಗೇ ಅಪ್ಪನ ಕಾಲ್ಮೇಗ ಮನಗ್ಸಿ ಹಗುರಾಗಿ ಕಟ್ಟಿದ್ಲಂತ್ರಿ.

ಈ ಮಾತು ಆಡಿದೊಡನೆಯೇ, ಯಂಕನ ದೇಹವೆಲ್ಲಾ ಒಮ್ಮೆ ನಡುಗಿತು.

" ಹೆದರಿಕೆಯಾಗುತ್ತೇನೋ ಯಂಕಾ ? "

ಯಂಕನು ಉತ್ತರ ಕೊಡಲಿಲ್ಲ. ನೀರವ . . . . ಮಾಳಿಗೆ ಯನ್ನು ನೋಡುತ್ತಾ ಮತ್ತೆ ಹೇಳಿದ :

" ಆ ಉರಿಬಿಸಿಲಾಗ ಯಂಗೋ ಏನೋ ಆ ಗಾಡಿ ಎಳ್ಕೊಂಡು ಓದ್ಳಂತೆ. ಮದಲ್ನಂಗೆ ನನ್ನ ಆ ಮಟ್ಟೇ ಬುಡ್ದಾಗ ಮನಗ್ಸಿ ಅಪ್ಪನ್ನ ಗುಂಡೀಗೆ ದೂಡಿದ್ಲಂತೆ . . . . ಮಣ್ಣ ಮುಚ್ಚಾಕೆ . . . . ಮನಸಾಗವಲ್ದಂತ್ರಿ . . . . . ಅಂಗೇ ಅಟ್ಟೊತ್ತು ಅವನ್ನಪ್ಪಿಕೊಂಡು ಬಿಟ್ಲಂತ್ರಿ . . . . ಮೈಯೆಲ್ಲಾ ಮಣ್ಣಾದ್ರೂ ಬಿಡ್ಲಿಲ್ವಂತ್ರಿ . . . . . ನನ್ನೂ ಎತ್ಕೊಂಡೋಗಿ ಆ ಎಣದ ಬದೀಮ್ಯಾಕ ಒಂದೀಟೊತ್ತು ಮನಗ್ಸಿದ್ಲಂತೆ . . . . "

ಯಂಕನ ದೃಷ್ಟಿ ಅರ್ಥವಿಲ್ಲದೆ ಮಾಳಿಗೆ ಕಡೆಗೇ ನೆಟ್ಟಿತ್ತು. ರಂಗನಾಥರಾಯರು ಉಸಿರು ಕೂಡ ಬಿಡದೆ ಕುಳಿತಿದ್ದರು. ಲಲಿತಮ್ಮನ ಕಣ್ಣುತುಂಬ ನೀರಿಳಿಯುತ್ತಿತ್ತು.

" ಏಟೊತ್ತು ಅಂಗೇ ಇರಾಕಾದೀತ್ರಿ. ನನ್ನೆತ್ಕೊಂಡು, ಕೊಳ್ಳಾಗಿನ ತಾಳೀಮಣೀ ಅರ್ದು, ಅದರ ಬಾಯಿಗೆ ಆಕಿದ್ಲಂತ್ರಿ. ಮಣ್ಣ ಮುಚ್ಚಿ, ಗಳಗಳಾ ಅಳ್ತಾ ನನ್ನ ಕರ್ಕೊಂಡು ಮನೀಗ ಬಂದ್ಲಂತ್ರಿ. ಹೊತ್ತೇನು ಸುಮ್ನೇ ಆತನ್ರಿ. ಹೊತ್ತು ಮುಣುಗಿ ಹೋಗಿತ್ತಂತೆ. ಹಟ್ಟಿಯಲ್ಲಾ ರಣರಣಗುಟ್ಟಿತಂತ್ರಿ. ಆವನ ಸಂಗ್ತೀಲೆ ಇದ್ದಟ್ಟೇಲಿ ಇನ್ಮ್ಯಾಕೆ ಒಬ್ಬಳೀ ಇರದಾದೆ ಅಂತಂದ್ಕೊಂಡು ಕತ್ಲಾಗೆ, ಹುಚ್ಚೀ ಹಂಗ ಹೋಗೇ ಬಿಟ್ಲಂತೆ ನನ್ನೂ ಕರ್ಕೊಂಡು

. . . . ಎಲ್ಲಿಲ್ಲೋ ತಿರುಗಿ ತಿರುಗಿ ಕೊನೀಗೆ ಗೌಡರ ಹಳ್ಳೀಗೆ ಬಂದ್ಲಂತೆ. ದೊಡ್ಡ ಗೌಡ್ರು ಬಲು ಒಳ್ಳೇರು; ಇಲ್ಲೇ ಇರು ಅಂದ್ರು; ಅಲ್ಲೇ ಇದ್ದವ್ರಿ."

ಸ್ವಲ್ಪ ಕಾಲ ಎಲ್ಲರೂ ಸುಮ್ಮನಿದ್ದರು.

"ಯಂಕಾ, ನಿನಗೆ ಅಕ್ಕ, ಅಣ್ಣಾ ಯಾರೂ ಇಲ್ಲೇ?" ಎಂದು ರಾಯರು ಕೇಳಿದರು.

"ಇಲ್ರೀ. ನಾನೊಬ್ಬನೇ ಅಂತೇ. ನಾ ಹುಟ್ಟಿದಾಗ ಅಪ್ಪ ಗಿನ್ನೂ ಎಲ್ಡು ಹತ್ತುವರ್ಸ ಆಗಿದ್ವಂತೆ."

"ಇದನ್ನೆಲ್ಲಾ ನಿಮ್ಮಮ್ಮನೇ ನಿನಗೆ ಹೇಳಿದಳು?"

"ಹೌದ್ರಿ. . . . . ಅವಳು ಸಾಯಾಕ ನಾಕುದಿನ ಇರೋಕೆ ಮುಂಪೆ ಮಾತಿಗ್ಮಾತು ಬಂದು ಹೇಳಿದ್ಲು."

"ನಿಮ್ಮ ಅವ್ವನಿಗೆ ಏನಾಗಿತ್ತೋ?"

ಯಂಕನ ಮುಖವನ್ನು ನೋಡಿ, ರಾಯರಿಗೆ ಆ ಪ್ರಶ್ನೆಯನ್ನೇ ಕೇಳಬಾರದಿತ್ತು ಎನಿಸಿತು. ಸ್ವಲ್ಪ ತಡೆದು ಯಂಕ ಹೇಳಿದನು:

"ಏನೋ ನಂಗ ನೆಪ್ಪಿಲ್ರಿ. ಅವ್ವ ಗೌಡ್ರ ಮನೀಗೆ ಹೋಗುವಾಗ ನನ್ನೂ ತರಕೊಂಡು ಹೋಗಿದ್ಲು. ನಾನು ಎತ್ತು ಮೇಯಿಸ್ಲಿಕ್ಕೆ ಹೋಗತಿದ್ದೆನ್ರಿ, ದೊಡ್ಡವನಾದ್ಲಾಗಾತು. ಇಂಗೇ ಎಲ್ಡು ಮೂರು ವರ್ಸ ಕಳೀತು. ಅವ್ವ ಒಂದಿನ ಮನೀಕ ಬಂದೋಳೆ, "ಯಂಕಾ, ದೊಡ್ಡ ಗೌಡ್ರು ತೀರ್ಕೊಂಡ್ರು. ನಾವಿನ್ನು ಇಲ್ಲಿರಾಕಾಗ್ದು. ಎಲ್ಲಾರ ಹೋಗಾನ," ಅಂದ್ಲು. ಅಂದ್ಲಷ್ಟೇ. ಎಲ್ಲಿಗೆ ಹೋಗಾಕಾದೀತು? ಅಲ್ಲೇ ಇದ್ವಿ. ಅವ್ವ ಮಾತ್ರ ಸಣ್ಣ ಗೌಡ್ರನ ಕಂಡರೆ ಸಿಡಗುಟ್ಟು ತಿದ್ಲು."

"ಅವರೂ ಬಲು ಸಿಟ್ಟನೋರೆ. ಉರೀತಿದ್ರು. ಒಂದಿನ ಚಂಜೀಗೆ ಎತ್ತು ಹೊಡಕೊಂಡ್ಬರೋದು ಹೊತ್ತಾತು ಅಂತ ಉಣ್ಣೇ ಬರಲ್ನಿಂದ ರಪಾರಪಾ ಹೊಡದ್ರಿ ನನ್ನ . . . ."

ಹೇಳುತ್ತಲಿದ್ದ ಯಂಕನ ಕಣ್ಣುಗಳು ಕಾಲುಗಳ ಕಡೆ ತಿರುಗಿದುವು; ಏಟು ಬಿದ್ದ ಜಾಗದ ಕಡೆಗೆ ತಿರುಗಿದುವು.

"ಕಡೀಕ ಅವ್ವ ಗೌಡ್ರ ಮನೀಕಡೆ ಹೋಗ್ತಾನೇ ಇರ್ಲಿಲ್ರಿ. ಎಲ್ಲಾರ ಯತ್ನಿಲ್ದಿದ್ರೆ ಹೋಗ್ತಿದ್ಲು."

"ಒಂದು ದಿನ ಚಂಜೀಗೆ ಎತ್ಕಟ್ಟೆ ಮನೀಕ ಬಂದೆನ್ರಿ. ಬರಾಣ ಅವ್ವನ ಮಕ ಇಟ್ಟಾಗಿತ್ರಿ. "ಅವ್ವ, ಅವ್ವ, ಏನಾಗ್ಯೆತಿ" ಅಂದೆನ್ರಿ. "ಬಂದ್ಯಾ, ಯಂಕಾ, ನಿನ್ನ ಕಾಣತ್ನೋ ಇಲ್ಲೋ ಅಂತಿತ್ತು ಜೀವ. ಈ ಪರಪಂಚ ನನಗ ಸಾಕು. ಯಂಕಾ, ನಾನಂತೂ ಬಾಳಾಕಿಲ್ಲ" ಅಂತ ಅಳಾಕೆ ಸುರುಮಾಡಿದ್ಳು. ಅಳ್ತಾ ಅಳ್ತಾ ಅಂಗೇ ಕೆಳಕೆ ಬಿದ್ಲರಿ. ನಾ ಗಾಬ್ರಿಂದ ದೀಪ ದೊಡ್ಡದು ಮಾಡಿ ಅವ್ವನತ್ರ ಹೋಗ್ನೋಡಿದ್ರೆ . . . . ಅವ್ವನ ಮೈಯೆಲ್ಲಾ . . . ಹಸ್ರಾಗಿತ್ತು. ಮಗ್ಲಟ್ಟೇ ಬೀರನ್ನ ಕರ್ದು ತೋರಿಸಿದೆ. ಅವ್ನೂ ಗಾಬ್ರಿ ಬಿದ್ದು ಗಟ್ಯಾಗಿ ಕೂಗು ಹಾಕಿದ. ಅವ್ರೂ ಇವ್ರೂ ಎಲ್ಲಾ ಬಂದರಿ. ಅವರೇಳಿದ್ರು ಅವ್ವನ ಜೀವ ಹಾರಿಹೋಗ್ಯೆತೀಂತ."

ಯಂಕನು ಕಣ್ಣೊರಸಿಕೊಂಡನು. "ಎಲ್ಲಾ ಸೇರಿ ಅವ್ವನ್ನ ಮಣ್ಮಾಡಾಕೆ ಒಯ್ದರ್ರಿ. ನಾನೇನೋ ಅತ್ತತ್ತು ಸಾಕಾಗಿ ಮನಗಿಬಿಟ್ಟೆ. ಅವ್ವ ಹೇಳಿದ್ಮಾತು ಮರೀದೆ ಉಳಿದವ್ರಿ . . . .

"ಅಂಗೇ ಒಂದೆಲ್ಡು ತಿಂಗ್ಳು ಗೌಡ್ರ ಮನೇಲಿ ಕೆಲಸಮಾಡಿಕೊಂಡಿದ್ದೆ. ಆದ್ರೆ ಅವರ ಬಾಧೆ ತಡಿಲಾರ್ದೆ ಹೋದೆನ್ರಿ. ಒಂದಿನ ರಾತ್ರಿ, ಎಲ್ಲಾರ ಭಾವಿಮಾನಾದ್ರೂ ಬೀಳಾಣಾಂತ ಓಡಿಬಂದೆನ್ರಿ. ಆದ್ರೆ ಬೀಳಾಕ ಮನಸೊಪ್ಲಿಲ್ರಿ. ಅಂಗೆ ದೇಶಾಂತ್ರನಾರ ಹೋಗೋಣ ಅಂತ ಬಂದೆನ್ರಿ."

ಯಂಕನು ಗಳಗಳ ಅಳತೊಡಗಿದನು.

"ಯಂಕಾ, ನಮ್ಮನೀಲೇ ಕೈಲಾದ ಕೆಲಸ ಮಾಡಿಕೊಂಡಿರ್ತೀಯೇನೋ?" ರಾಯರು ಕೇಳಿದರು.

ಯಂಕನು ಮಾತಾಡಲಿಲ್ಲ. ಒಪ್ಪಿಗೆ ಅವನ ಮುಖದಲ್ಲಿ ಮೂಡಿತ್ತು.

"ಪರವಾ ಇಲ್ಲ, ಯಂಕಾ. ನಾವೇನೂ ಹೊಡೆಯೊಲ್ಲ. ಬಡಿಯೊಲ್ಲ. ಇದ್ದುಬಿಡು."

ಯಂಕನ ಕಣ್ಣುಗಳೆರಡರಲ್ಲೂ ಕಂಬನಿ ತುಂಬಿದ್ದುವು; 'ಹುಂ' ಎಂದನು.

ಂ ಂ ಂ ಂ ಂ

"ಗೊಜ್ಜೀಗೆ ಉಪ್ಪೇ ಹಾಕಿಲ್ವಲ್ಲೇ?"

"ನೋಡೀ, ಅಂದ್ರೆ."

"ಏನು ನೋಡೋದು. ಕತೆ ಕೇಳಿದ್ಮೇಲೆ ಮಂಕಾಗಿ ಅತ್ತ ಇತ್ತ ತಿರುಗಾಡ್ತಾ ಉಪ್ಪುಹಾಕೋದೇ ಮರೆತುಬಿಟ್ಟಿದೀಯ."

"ಅಲ್ಲ ಅಂದ್ರೆ. ಅವನ ತಾಯೀಗೆ ಎಷ್ಟು ಕಷ್ಟ ಆಗಿರಬೇಕು?"

"ಹುಂ. ಯಾರ್ಯಾರ ಬಾಳು ಹೇಗೋ" ಎಂದರು ರಾಯರು.

. . . . . .

# ಸರಸಿಯ ಸೌಭಾಗ್ಯ

"ಏನೋ, ಅಂತೂ ಸುಮಾರಿದ್ದಾನೆ. ಆದರೂ ಜೋಯಿಸರು ಹೇಳಿದಾರಂತೆ ಶಾಂತಿ, ಹೋಮ ಮಾಡಬೇಕು ಅಂತ. ಅದಕ್ಕಾಗಿ ಏರ್ಪಾಟು ಮಾಡುತ್ತಿದಾರೆ. ಸರಸಿಯ ಜಾತಕ ಚೆನ್ನಾಗಿಲ್ಲ. ಮದುವೆ ಆದಾರಭ್ಯ ತಮ್ಮ ಹುಡುಗಗೆ ವೈಗೆ ಚೆನ್ನಾಗಿಲ್ಲಾಂತ ಸೋಮೂನ ತಂದೆ ಬಡಬಡಿಸುತ್ತಿದ್ದಾರೆ," ಎಂದ ಗೋಪಿ.

"ಹುಚ್ಚ, ಹುಚ್ಚಾ! ಲಗ್ನಕ್ಕೆ ಮುಂಚೆ ನೂರಾರು ಜನರಿಗೆ ಜಾತಕ ತೋರಿಸಿದಾನೆ. ಅಲ್ಲದೇ ತನಗೂನೂ ಜಾತಕ ನೋಡಲಿಕ್ಕೆ ಚೆನ್ನಾಗಿಯೇ ಬರುತ್ತೆ. ಸರಸಿಯ ಸೌಭಾಗ್ಯ ಚೆನ್ನಾಗಿದೇ ಅಂತ ತಾನೇ ಒತ್ತಾಯದಿಂದ ಲಗ್ನ ಜರುಗಿಸಿದ್ದಾನೆ. ಈಗ ಜಾತಕ ಚನ್ನಾಗಿಲ್ಲ, ಹಾಗಿಲ್ಲ, ಹೀಗಿಲ್ಲ ಅಂದರೆ," ರಾಮರಾಯರು ಮಾತ ನಾಡಿದರು.

ನಿಟ್ಟುಸಿರೆಳೆದು ಮತ್ತೆ ಗೋಪಿ ಅಂದ "ಅಲ್ಲಪ್ಪ, ಅಳಿಯ ನಮ್ಮ ಮನೇಲೇಇರಲಿ ಅಂತ ಅಮ್ಮ ಅವನಿಗೆ ಮದ್ದು ಹಾಕಿದಾಳಂತೆ. ದೇವರೆ, ಪುಣ್ಯಾತ್ಮನಿಗೊಂದು ಗುಣ ಆದರೆ ಉಳಿದೆಲ್ಲಾ ಚರ್ಚೆ. ಈಗೇಕೆ ನೊಂದಮನಸ್ಸಿನಲ್ಲಿ?"

ರಾಮರಾಯರು ಜಮೀನುದಾರರು. ಸರಸಿಯು ಅವರ ಅಣ್ಣನ ಮಗಳು. ತಾಯಿ ತಂದೆ ಇಲ್ಲದುದರಿಂದ ರಾಮರಾಯರೇ ಅವಳನ್ನು ಮಗಳಂತೆ ಸಲಹಿದರು. ಅವರ ಏಕಮಾತ್ರ ಪುತ್ರನೇ ಮೊದಲು ಮಾತಾಡಿದ ಗೋಪೀ. ಅವನೂ ಸೋಮುವೂ ಒಂದೇ ತರಗತಿಯಲ್ಲಿ ಓದುತ್ತಿದ್ದರು. ಮೊದಲಿನಿಂದಲೂ ಮಗನ ಸಂಗಡ ಇರುವ ಸೋಮೂನನ್ನು ನೋಡಿ ಅವನ ನಡೆ ನುಡಿ ಗುಣ ಎಲ್ಲಕ್ಕೂ ಮೆಚ್ಚಿ

ಸರಸಿಯನ್ನು ಅವನಿಗೆ ಕೊಡಲು ರಾಮರಾಯರೂ ಸೀತಮ್ಮನೂ ಒಪ್ಪಿದ್ದರು. ಅಂತೂ ಮದುವೆಯೂ ಆಯಿತು.

ಪರೀಕ್ಷೆಗೆ ಎಂದು ಹಗಲೂ ರಾತ್ರಿಯೂ ವಿರಾಮವಿಲ್ಲದೇ ಓದಿ ಓದಿ ಸೋಮೂವಿನ ಆರೋಗ್ಯ ಕೆಟ್ಟುಹೋಗಿತ್ತು. ಗೋಪಿಯು ಜಾಗರೂಕತೆಯಿಂದ ಕಾಲಕಾಲಕ್ಕೆ ಔಷಧೋಪಚಾರ ಮಾಡದಿದ್ದಲ್ಲಿ ಇಷ್ಟರಲ್ಲಿಯೇ ಅವನು ಕ್ಷಯಕ್ಕೆ ಬಲಿಬೀಳಬೇಕಿತ್ತು.

ಈ ಸಲ ರಜಾ ಬಂದೊಡನೆಯೇ ಸೋಮು ಇಲ್ಲಿಗೇ ಬಂದುಬಿಟ್ಟನು. ಕಾರಣ ಗೊತ್ತೇ ಇದೆ. ಸರಸಿಯ ಸಹವಾಸ! ಅದೇನೋ ಅಕಸ್ಮಾತ್ತಾಗಿ ಜ್ವರ ಪ್ರಾರಂಭವಾಯಿತು. ಈ ವರ್ತಮಾನ ಕೇಳಿ ಅವನ ತಾಯಿತಂದೆಗಳು ಓಡಿ ಬಂದರು. ಬಂದವರೇ ತಡಮಾಡಲೇ ಇಲ್ಲ. ಕೂಗುತ್ತ ಅಳುತ್ತ ಒಂದು ಗಾಡಿ ಮಾಡಿಕೊಂಡು ಮಗನನ್ನು ಊರಿಗೆ ಕರೆದೊಯ್ಯಲು ಅಣಿ ಮಾಡಿಕೊಂಡರು. “ಅಷ್ಟುದೂರ ಗಾಡಿಮೇಲೆ ಜ್ವರ ಬಂದವನನ್ನು ಕರೆದೊಯ್ದರೆ ಅಪಾಯವಾದೀತು” ಎಂದು ಯಾರೋ ಸೂಚಿಸಿದರು. “ಕಾರಿಗೆ ದುಡ್ಡು ನಿಮ್ಮ ತಾತ ಕೊಡುತ್ತಾನಾ?” ಎಂದು ಬಂದಿತು ಉತ್ತರ. ಗೋಪಿ, ರಾಮರಾಯರು, ಸೀತಮ್ಮ ಎಲ್ಲರೂ ಕೇಳಿಕೊಂಡರು. ನೀರಿನಲ್ಲಿ ಹೋಮಮಾಡಿದಂತಾಯಿತು ಅವರ ಮಾತು ಮತ್ತು ಪ್ರಯತ್ನ.

ರಾಮರಾಯರು ಬರೆದ ಕಾಗದ ಒಂದಕ್ಕೂ ಜವಾಬು ಬರಲಿಲ್ಲ ಅವರಿಂದ. ಸೋಮುವಿನ ತಂದೆ ತಮ್ಮ ಹೆಂಡತಿ ಹಾಕಿದ ಗೆರೆ ದಾಟುವ ಪ್ರಕೃತಿಯವರಲ್ಲ.

“ಅಲ್ಲಾ, ಸೋಮೂಗೆ ಅಷ್ಟು ಖಾಯಿಲೆಯಾದರೂ ಮಗಳನ್ನು ಕಳಿಸದಿದ್ದವರಿಗೆ ಕಾಗದ ಏಕೆ ಬರೆಯಬೇಕು? ನಮ್ಮ ಸೋಮೂಗೆ ಖಾಹಿಲೆ ಒಂದು ಹುಷಾರಾಗಲಿ. ಇವರಿಗೆ ಪಾಠ ಕಲಿಸುತ್ತೇನೆ. ಬೇರೆ ಮದುವೆ ಮಾಡಿಯೇ ಸಿದ್ಧ.” ಇದು ಅಲ್ಲಿಯ ಮಾತು.

ಕಾಗದಗಳಿಗೆ ಉತ್ತರ ಬರದಿದ್ದರಿಂದ ಗೋಪಿ ಅಲ್ಲಿಗೊಂದು ಸಲ ಹೋಗಿ ವರ್ತಮಾನ ತಂದನು.

೦ ೦ ೦ ೦ ೦

ಇದಾದ ಹದಿನೈದು ದಿನಗಳ ಅನಂತರ ಸೋಮೂನ ತಂದೆ ಯವರಿಂದ ಒಂದು ಕಾಗದ ಬಂದಿತು. ಅದರಲ್ಲಿ ಅವನ ಆರೋಗ್ಯ ವಿಷಯವೇ ಇರಲಿಲ್ಲ; ಅವನಿಗೆ ಗ್ರಹಚಾರವೆಂದೂ, ಸರಸಿಯು ಅಶ್ವತ್ಥಪ್ರದಕ್ಷಿಣೆ ಮಾಡಬೇಕೆಂದೂ ಬರೆದಿದ್ದನು. ಗೋಪಿ ಓದಿದ ಯುವಕ. ಅವರ ಮೂಢ ನಂಬಿಕೆಗೆ ಸಿಟ್ಟಾಗಿ ಕೂಗಿಕೊಂಡನು. ಆದರೆ ಸೀತಮ್ಮ "ಬಿಡೋ, ಗೋಪಿ, ಏನಾದರೂ ಆಗಲಿ. ಅಂತೂ ಸೋಮು ಹುಷಾರಾಗಿ ಮೇಲೆದ್ದರೆ, ಸರಸಿಯು ಇದರ ಹತ್ತರಷ್ಟು ಕಷ್ಟ ಬೇಕಾದರೂ ಸಹಿಸಿಯಾಳು" ಎಂದರು.

ಸರಸಿಯು ಇನ್ನೂ ಕಿಶೋರಿ. ಅವಳ ಸರಳತೆ, ಗುಣ, ಅಕೃತ್ರಿಮ ಸೌಂದರ್ಯ—ಎಲ್ಲವೂ ಅವಳನ್ನು ಅವರಿಗೆಲ್ಲಾ ಅಚ್ಚು ಮೆಚ್ಚಿನವಳನ್ನಾಗಿ ಮಾಡಿದ್ದುವು. ಮನಮುಟ್ಟಿ ಗಂಡನನ್ನು ಪ್ರೀತಿಸು ತ್ತಿದ್ದಳು. ಗೋಪು ಎಲ್ಲಾದರೂ ಸೋಮೂನ ವಿಚಾರಮಾಡಿದರೆ ಸಾಕು ತಾನೇ ಕಿವಿಯಾಗಿ ಕೇಳುತ್ತಿದ್ದಳು.

ಮಾವನ ಮನೆಯಿಂದ ಕಾಗದ ಬಂದಾಗಿನಿಂದ ದಿವಸವೂ ಒದ್ದೆ ಬಟ್ಟೆಯನ್ನುಟ್ಟು ಬೆಳಗ್ಗೆ ನೂರೆಂಟುಸಲ ಅಶ್ವತ್ಥನಾರಾಯಣನ ಸೇವೆ ಮಾಡಿದಳು. ಹೆಚ್ಚು ಸಲ ಪ್ರದಕ್ಷಿಣೆ ಮಾಡಿದರೆ ಜಾಗ್ರತೆಯಾಗಿ ಗಂಡನಿಗೆ ಗುಣವಾದೀತೆಂದು, ಹೆಚ್ಚು ಸಲ ಪ್ರದಕ್ಷಿಣೆ ಮಾಡಿದಳು.

ಆದಿನ ಅವಳು ಪ್ರದಕ್ಷಿಣೆ ಮುಗಿಸಿಕೊಂಡು ಕಾಲೆಳೆಯುತ್ತ ಮನೆಗೆ ಬಂದಿದ್ದಳು. ಅಷ್ಟರಲ್ಲಿ ಅಂಚೆ ಜವಾನನು ಕಾಗದವನ್ನು ತಂದುಕೊಟ್ಟನು. ಗೋಪಿಯು ನಡುಗುವ ಕೈಯಿಂದ ಅದನ್ನು ಒಡೆದು ನೋಡಿ "ಸೋಮೂ" ಎಂದು ಚೀರಿ ಗೋಡೆಗೆ ಒರಗಿದನು.

ಸೀತಮ್ಮನವರು "ಅಯ್ಯೋ ದುರದೃಷ್ಟವೇ, ಗಂಡನನ್ನು ಕಳೆದುಕೊಂಡೆಯೋ, ಅಯ್ಯೋ ನಿನ್ನ ಸೌಭಾಗ್ಯವೇ, ಇನ್ನೇನು ಗತಿ" ಎಂದು ಕೂಗಿದರು.

ಸರಸಿಗೆ ಶೂಲ ಇರಿದಂತಾಯಿತು- ಅವರ ಮಾತು ಮುಗಿವ ಸ್ವರದಲ್ಲಿಯೇ ಸ್ಮೃತಿ ತಪ್ಪಿ ಕೆಳಗೆ ಬಿದ್ದಳು!

೨

ಎಷ್ಟೋ ದಿನಗಳು ಉರುಳಿವೆ. ರಾಮರಾಯರು ಮಗಳ ದುಃಖವನ್ನು ನೋಡಿ ಕೊರಗಿ ತೀರಿಹೋಗಿದಾರೆ. ಗೋಪಿಯು ಈಗ ತಾಯಿ, ತಂಗಿ, ಹೆಂಡತಿಯರೊಡನೆ ಸಂಸಾರ ಮಾಡುತ್ತಿದ್ದಾನೆ.

ಸರಸಿ ಈಗ ಕಿಶೋರಿಯಲ್ಲ. ದೊಡ್ಡವಳಾಗಿದ್ದಾಳೆ. ನೊಂದ ಗಾಯದ ಮೇಲೆ ಬರೆ ಏಕೆ ಎಂದು ಕೂದಲು ತೆಗೆಸಿಲ್ಲ. ಅವಳಿಗೆ ಅಡಿಗೆಮನೆಯಲ್ಲಿ ಮಾತ್ರ ಪ್ರವೇಶವಿಲ್ಲ.

ಇದೆಲ್ಲದರಿಂದ ಸರಸಿಗೆ ದುಃಖ. ನಿಜ. ಬೇಕಾದಷ್ಟು ವಿರಾಮವಿದೆ. ಚೆನ್ನಾಗಿ ಓದು ಬರಹ ಬರುತ್ತಿದೆ. ಪರಭಾಷೆಯನ್ನೂ ಕಲಿಯತೊಡಗಿದ್ದಾಳೆ.

ಗೋಪಿಯು ಸ್ವಲ್ಪ ಸಮಾಜಸುಧಾರಕ ಮನಸ್ಸಿನವನು. ತಂಗಿಗೆ ಇನ್ನೊಂದು ಮದುವೆ ಏಕೆ ಮಾಡಕೂಡದು ಎಂದು ಯೋಚಿಸ ತೊಡಗಿದನು. ತಾಯಿ ಮಾತ್ರ ಇದಕ್ಕೆ ಸಮ್ಮತಿ ಕೊಡರು. ಸರಸಿ ಕೂದಲನ್ನು ತೆಗೆಸದಿದ್ದುದನ್ನೇ ಅವರು ಹೇಗೋ ಅಭಿಮಾನದಿಂದ ನುಂಗಿಕೊಂಡಿದ್ದರು.

ಒಂದು ದಿನ ಸೀತಮ್ಮ ಬತ್ತಿ ಮಾಡುತ್ತ ಕುಳಿತಿದ್ದರು. ಗೋಪಿಯು ಬಂದ. ಕೈಯಲ್ಲೊಂದು ಪೇಪರು. "ಅಮ್ಮಾ, ಇಲ್ಲಿ ನೋಡು. ಮೊನ್ನೆ ಶಿರಸಿಯಲ್ಲಿ ಹದಿನೆಂಟು ವಯಸ್ಸಿನ ಬ್ರಾಹ್ಮಣ ವಿಧವೆಗೆ ಮದುವೆಯಾಯಿತಂತೆ" ಎಂದು ಓದಿ ಹೇಳಿದ.

"ಹರಿ ಹರಿ" ಎಂದವರೇ ಸೀತಮ್ಮ ಕಿವಿಗಳನ್ನು ಮುಚ್ಚಿಕೊಂಡು "ಅಲ್ಲೋ, ಹದಿನೆಂಟು ವರ್ಷ, ಗಂಡ ಸತ್ತವಳು, ರಾಮ ರಾಮ! ಮೈನೆರೆದು ದೊಡ್ಡವಳಾಗಿದಾಳೆ. ಇನ್ನೊಂದು ಮದುವೆಯಾಯಿತೆ? ಏನು ಕಲಿಕಾಲ ಬಂತಪ್ಪಾ."

"ಹೌದಮ್ಮ. ಇದೇನು ಸುಳ್ಳಲ್ಲ. ದೊಡ್ಡವಳಾಗಿದಾಳೆ. ಅವಳ ಒಪ್ಪಿಗೆಯಿಂದಲೇ ಮದುವೆಯಾದದ್ದು. ಇಂಥದಕ್ಕೆಲ್ಲಾ ಬಲಾತ್ಕಾರ ಸಾಧ್ಯವೇ? ಏನೋ ನಮ್ಮಲ್ಲಿ ಪದ್ಧತಿ ಬಂದಿಲ್ಲ. ಇನ್ನು ಮೇಲೆ ಬಂದೇಬರುತ್ತದೆ."

"ಬರುತ್ತೆ, ಬರುತ್ತೆ. ಏನು ಸೂಳೇರಿಗಿಂತ ಹೆಚ್ಚಿತಲ್ಲೋ" ಎಂದರು ಸೀತಮ್ಮ.

"ಶಾಸ್ತ್ರ ಕೂಡ ಒಪ್ಪುತ್ತೇ ಅಮ್ಮ."

"ಬಿಡೊ ಬಿಡೊ. ಬಹಳ ಶಾಸ್ತ್ರ ಕಂಡವನು. ನೀವೆಲ್ಲಾ ಜಾಣರಂತೆ ಮಾತಾಡುತ್ತೀರಾ. ಒಂದು ಸಂಧ್ಯಾವಂದನೆ ಮಂತ್ರ ಬರದಿದ್ದರೂ ಕೂಡ."

"ಅಲ್ಲ ಅಮ್ಮ. ತೀರ ಚಿಕ್ಕವರಾಗಿರುವಾಗಲೇ, ಗಂಡ, ಮದುವೆ, ಸಂಸಾರ ಎನ್ನೋದು ಗೊತ್ತಾಗಲು ಸಾಧ್ಯವಿಲ್ಲದ ವಯಸ್ಸಿನಲ್ಲಿ ಮದುವೆ ಮಾಡಿ, ಅಂಥವರಿಗೆ ಗಂಡ ಸತ್ತುಹೋದರೆ ಅಯ್ಯೋ ಅನ್ನಿಸುವುದಿಲ್ಲೆ? ಅವರಿಗೇಕೆ ಮದುವೆ ಮತ್ತೆ ಮಾಡಬಾರದಮ್ಮ?"

"ಏನೋಪ್ಪ. ಹುಟ್ಟಿದ ಮೇಲೆ ಏನೇನು ಬರುತ್ತೋ ಅನುಭವಿಸಲೇಬೇಕು. ನೀನು ಏಕೆ ಇಷ್ಟು ಒದ್ದಾಡುತ್ತೀ?"

"ಇಲ್ಲಿ ನೋಡಮ್ಮ, ನಮ್ಮ ಸರಸೀಗೆ ಎಂಥಾ ದುರ್ದೈವ ಬಂತು. ಅವಳಿಗೆ ತಾನೂ ಎಲ್ಲರಂತೆ ಇರಬೇಕು ಎಂಬ ಆಸೆ ಬರುವುದಿಲ್ಲವೇ? ಎಷ್ಟು ಕಷ್ಟ ಸಹಿಸುತ್ತಿದಾಳೆ. ಅವಳನ್ನು ನೋಡಿದರೆ ನನಗಂತೂ ಕರುಳು ಹಿಂಡಿದಂತಾಗುತ್ತದೆ. ಯಾರಾದ

ರೊಬ್ಬ ಗುಣವಂತನನ್ನು ನೋಡಿ . . . . ಸರಸೀನ . . . . ಕೊಟ್ಟು . . . . ಲಗ್ನ . . . ."

"ಅಯ್ಯೋ, ಏನಪ್ಪ ಇದು. ಏನು ಮಾತು. ಅವಳನ್ನು ಕೂದಲಿಟ್ಟುಕೊಳ್ಳಲಿಕ್ಕೆ ಬಿಟ್ಟಿದ್ದಲ್ಲದೆ ಈಗ ಬೇರೆ ಲಗ್ನ ಮಾಡು ತ್ತೀಯಾ? ಚೆನ್ನಾಗಿದೆ. ಅವಳು ಹಾಗೇನೆ ಇರಬೇಕು. ಅದು ಅವಳ ಕರ್ಮ. ಅವಳು ಪಡೆದುಬಂದ ಸೌಭಾಗ್ಯ. ಈಗಿನ ಕಾಲ ದವರಿಗೇನು ಹೇಳಪ್ಪಾ? ನಾನು ಬದುಕಿರುವವರೆಗೆ ಇಂತಹ ಹುಚ್ಚಾಟ ನನ್ನ ಕಣ್ಣಮುಂದೆ ಬೇಡ. ಒಮ್ಮೆ ನೀನು ಮೊಂಡಾಟಕ್ಕೆ ನಿಂತರೆ ನಾನೂ ಹಾಗೇನೆ ಸೈ. ಅವಳನ್ನು ಹುಟ್ಟಲಿಲ್ಲ ಎನ್ನಿಸೇನೇ ಹೊರತು ಮದುವೆಯಾಗಲಿಕ್ಕೆ ಎಂದೂ ಬಿಡುವುದಿಲ್ಲ." ಈರೀತಿ ಕೂಗಿದರಲ್ಲದೆ ,ಗಂಗಾ ಯಮುನಾ ಪ್ರವಾಹವನ್ನೂ ಕರೆದರು.

ಇನ್ನು ಅಲ್ಲಿರುವುದು ಸರಿಯಲ್ಲವೆಂದು ಗೋಪಿಯು ಹೊರಕ್ಕೆ ನಡೆದನು. ಪಕ್ಕದ ಕೋಣೆಯಲ್ಲಿ ಕುಳಿತು, ದುಗುಡದಿಂದ ಇದನ್ನೆಲ್ಲ ಕೇಳಿದ ಸರಸಿಯ ಕಣ್ಣು ಕಣ್ಣೀರಿನ ಸರಸಿಯಾಗಿತ್ತು.

೩

ಗೋಪಿಗೊಂದು ಮಗುವಿದೆ. ಹೆಂಡತಿ ಪುನಃ ಗರ್ಭಿಣಿ. ಸೀತಮ್ಮನವರಿಗೆ ವಯಸ್ಸಾಗಿದೆ. ಕಣ್ಣು ಸರಿಯಾಗಿ ಕಾಣದು. ಕಿವಿ ಕೂಡ ಅಷ್ಟಕ್ಕಷ್ಟೆ. ಸೊಸೆಯಂತೂ ಅತ್ತೆ-ಅತ್ತಿಗೆಯರನ್ನು ದೂರುತ್ತ ಲೊಟಗುಟ್ಟುತ್ತಾ ಇರುತ್ತಾಳೆ.

ವಿರಾಮ ಗೋಪಿಗೆ ವಿರಳ. ಯಾವಾಗಲೂ ಜಮೀನಮೇಲೆ ಹೋಗಬೇಕು. ಹೀಗಾಗಿ ತಂಗಿಯ ಕಷ್ಟ ಸುಖ ವಿಚಾರಿಸಲಿಕ್ಕೂ ಆಗುತ್ತಿರಲಿಲ್ಲ. ಮನೆಯಲ್ಲಿ ಸರ್ವಾಧಿಕಾರ ಅವನ ಹೆಂಡತಿಯದೆ.

ಸರಸಿಯಂತೂ ಅತ್ತಿಗೆ ಎಷ್ಟೇ ಅನ್ನಲಿ, ಮರುಮಾತನಾಡದೆ ಕೆಲಸ ಮಾಡುತ್ತಿದ್ದಳು. ತಾರುಣ್ಯವಿದೆ; ಶಕ್ತಿ ಇದೆ. ಅತ್ತಿಗೆ

ಬಸಿರಾಗಿರುವುದರಿಂದ ಕೆಲಸದ ಹೊರೆ ಈಗ ಅವಳಮೇಲೆ. ಸ್ವಲ್ಪವೂ ಬೇಸರಗೊಳ್ಳದೆ ಮಾಡುತ್ತಿದ್ದಾಳೆ. ಅತ್ತಿಗೆ ಸುಮ್ಮನೆ ಕೂಡುವುದಲ್ಲದೆ, ಹಾಗೆ ಮಾಡಿದೆ, ಹೀಗೆ ಮಾಡಿದೆ ಎಂದು ಟೀಕೆ ಮಾಡುವಳು; ಊಟಕ್ಕೆ ಕುಳಿತಾಗ ಬೈಗಳು, ಅನಂತರವೂ ಬೈಗಳು. ಸರಸಿ ಏನು ಮಾಡಿಯಾಳು? ಕಣ್ಣೀರ ಕೂಳು ತಿನ್ನಬೇಕಾಗಿದೆ. ಒಳ್ಳೆಯ ಮಾತನಾಡುವವರೂ ಯಾರೂ ಇಲ್ಲ. ಗಂಡನ ಮನೆಗೆ ಹೋಗೋಣವೇ? ಯಾರಿಗಾಗಿ ಹೋಗಬೇಕು ಅಲ್ಲಿಗೆ? ತನ್ನ ನಚ್ಚಿನ ದೈವ ಕಣ್ಣು ಮುಚ್ಚಿ ಎಷ್ಟೋ ದಿನವಾಗಿದೆ. ಅತ್ತೆಮಾವಂದಿರೋ ಕಲ್ಲಿಗಿಂತಲೂ ಕಠೋರರು. ಇಲ್ಲಿ ಅತ್ತಿಗೆಗೆ ತನ್ನನ್ನು ಕಂಡರಾಗುವುದಿಲ್ಲ. ಹೋಗಲಿ. ಅವಳ ಮಗುವೂ ತನ್ನನ್ನು ದ್ವೇಷಿಸಬೇಕೇ? ಯಾರಾದರೂ ಒಳ್ಳೆಯ ಮಾತನಾಡುವವರು ಸಿಗುವರೇ? ಇದೇ ಅವಳ ಮನಸ್ಸಿನ ಹಾರೈಕೆ; ಹಂಬಲ.

ರಾಯಪುರ ಅತ್ತಿಗೆಯ ಊರು. ಗೋಪಿಯು ಭಾವ ಅಕ್ಕನ ಮನೆಯಲ್ಲಿ ಎರಡುದಿನ ಇದ್ದು ಆಕೆಯನ್ನು ತೌರೂರಿಗೆ ಕರೆದೊಯ್ಯಲು ಬಂದಿದಾನೆ. ಬಂದಮೇಲೆ ಕೂಡಲೇ ಹೊರಡಲಿಕ್ಕೆ ಎಲ್ಲಿ ಆದೀತು? ನಾಲ್ಕು ದಿನ ಆರು ದಿನವಾಗುತ್ತೆ. ಆರು ಎಂಟು ಹೀಗೆ.

ಅವನು ತಕ್ಕಮಟ್ಟಿಗೆ ಚೆನ್ನಾಗಿದಾನೆ. ಪಕ್ಕಾ ಘಾಟಿ. ಪ್ರಪಂಚ ಬಲ್ಲವನು. ಆದರೆ ಹಿಡಿತ ಸಾಲದು. ಅವನು ಹಾಗೂ ಹೀಗೂ ಹವಣಿಸಿ ಸರಸಿಯೊಡನೆ ಮಾತನಾಡುವನು ಅಯ್ಯೋ ಎಂದು ಮರುಗುವನು. ಆವಳನ್ನು ದೂರಬಾರದೆಂದು ತನ್ನ ಅಕ್ಕನಿಗೆ ಆಗಾಗ ಹೇಳುವನು. ಸರಸಿಯೊಡನೆ ಆಗಾಗ ಸವಿಮಾತನಾಡುವನು. ಅವನ ಅಕ್ಕ ಇವನ್ನೆಲ್ಲಾ ನೋಡದೇ ಇರಲಿಲ್ಲ. ಆಗಲಿ ಸರಿಯಾದ ಸಮಯ ಬರಲಿ ಎಂದು ಮೌನವಾಗಿಯೇ ಇದ್ದಳು.

ಒಂದು ದಿನ ಗೋಪಿ ಮನೆಗೆ ಬರುವಷ್ಟರಲ್ಲಿ, ದೊಡ್ಡ ಗಲಾಟೆ, ಕೂಗಾಟ ನಡೆದಿತ್ತು. ಗೋಪಿ, ಪಾಪ, "ಏನಿದು ಗಲಾಟೆ?" ಎಂದು ಕೇಳಿದ.

"ಏನಂತೆ ಗಲಾಟೆ. ಸಾಕಪ್ಪಾ ಸಾಕು ಈ ಮನೆ ಸಹವಾಸ. ಯಾರಿಗೆ ಬೇಕು ಈ ಮಾನಗೆಟ್ಟವರ ಸಂಗಡ ಬಾಳುವುದು. ನಾನು ಇನ್ನಿರಲಾರೆ. . ನನ್ನ ಊರಿಗೆ ಕಳುಹಿಸಿ" ಎಂದು ಹೆಂಡತಿ ಕೂಗಾಡಿದಳು.

"ಏನೇ ಅದು, ಕತ್ತೆ ಕಿರಿಚಿದ ಹಾಗೆ ಕೂಗುತ್ತೀ. ಬಾಯಿ ಬಿಟ್ಟು ಹೇಳು. ಏನು ನಿನಗೆ ಆಗಿರುವ ಗೋಳು" ಎಂದು ಗಂಡ ಕೇಳಿದ.

"ಈ ನಿಮ್ಮ ತಂಗೀ ಜೊತೆ ನಾನಿರಲಾರೆ. ಇನ್ಯಾರಾದರೂ ಅವಳ ಸಂಗಡ ಇಷ್ಟು ದಿನ ಇರುತ್ತಿರಲಿಲ್ಲ. ಏನು ಗುಣವೋ? ಏನು ಪಾತಿವ್ರತ್ಯವೋ?"

ಕ್ಷಣಕಾಲ ಗೋಪಿ ಅವಾಕ್ಕಾದ. ಅನಂತರ ಕೇಳಿದ: "ಏನು? ಪಾತಿವ್ರತ್ಯದ ವಿಷಯ?"

"ಹುಂ. ತಡೆಯಿರಿ. ತಿಳಿಯುತ್ತೆ. ಇನ್ನೆಂಟುತಿಂಗಳಲ್ಲಿ . . . ಹೀಗೆ ಇದ್ದರೆ . . ನಿಮಗೊಂದು ಸೊಸೇನೋ, ಅಳಿಯನೋ ಹುಟ್ಟುತ್ತೆ."

ಗೋಪಿ ಏನೂ ಮಾತನಾಡದಾದ. ಹೊರಕ್ಕೆ ಹೋದ. ಅವನ ಹೆಂಡತಿ ಸರಸಿಯ ಕೂದಲನ್ನು ಹಿಡಿದೆಳೆಯುತ್ತಾ "ಪಾಪಿ, ಅಳುತ್ತಿದ್ದೀಯ? ನನ್ನ ತಮ್ಮನಿಗೊಬ್ಬಳು ಹೆಂಡತಿ ಇದಾಳೆ ಅಂತ ನಿನಗೆ ಗೊತ್ತಿಲ್ಲವೇ? ನಿನ್ನ ಗಂಡನನ್ನು ಕೊಂದುಕೊಂಡೆ ಅಲ್ಲದೆ, ಅವಳಿಗೂ ಗಂಡನಿಂದ ಬೇರೆಯಾಗುವಂತೆ ಮಾಡುತ್ತಿದೀಯಾ . . ?"

"ಅಕ್ಕಾ . . . . ಅಕ್ಕಾ . . . ." ಅವಳ ತಮ್ಮ ಕೂಗಿಕೊಂಡ.

"ಸಾಕು ಸುಮ್ಮನಿರೋ. ನನಗೆಲ್ಲಾ ಗೊತ್ತಾಗಿದೆ. ಈಕೆ ನಿನಗೆ ಮಾಯೆ ಬೀಸುತ್ತಿದಾಳೆ. ಈ ಹುಚ್ಮುಂಡೆ ಮೊಕ ಎತ್ಕೊಂಡು ಬಾಳೋವಕ್ಕಿಂತ ಎಲ್ಲಾದರೂ ಹಾಳಾಗಿ ಕೆರೆ ಭಾವಿ ಪಾಲಾದರೂ ಆಗಬಾರದೇ" ಎಂದು ಸರಸಿಯನ್ನು ಹೊಡೆದಳು.

ಸರಸಿ ಅಳುತ್ತಾ ಮುಖ ಮುಚ್ಚಿಕೊಂಡು ಹಿತ್ತಲ ಕಡೆ ಹೋದಳು.

ಮಧ್ಯಾಹ್ನವೆಲ್ಲಾ ಶಾಂತವಾಗಿತ್ತು. ಮನೆಯಲ್ಲಿ ಏನೂ ಗಲಾಟೆ ಇಲ್ಲ. ರಾತ್ರಿಯಾಯಿತು. ಎಂಟು ಗಂಟೆಗೆ ಗೋಪಿಯು ಭಾವನೊಡನೆ ಬಂದ. "ಎಲ್ಲಿ ಸರಸಿ?" ಎಂದು ಕೇಳಿದ.

"ಮಧ್ಯಾಹ್ನದಿಂದಲೂ ಮನೇಲಿಲ್ಲ. ಎಲ್ಲಾದರೂ ಹೋಗಿರ ಬಹುದು. ಚಕ್ಕಂದ ಹೊಡೆಯುತ್ತಿರಬಹುದು" ಎಂಬುದಾಗಿ ಎತ್ತಲಾಗೋ ನೋಡುತ್ತ ಅವನ ಹೆಂಡತಿ ಉತ್ತರವಿತ್ತಳು.

ಗೋಪಿಗೆ ತಕ್ಷಣ ಏನೋ ಹೊಳೆಯಿತು. ಸ್ವಲ್ಪವೂ ತಡ ಮಾಡಲಿಲ್ಲ. ಕೈಯ್ಯಲ್ಲೊಂದು ಲಾಂದ್ರ ಹಿಡಿದುಕೊಂಡು ಹಿತ್ತಲ ಭಾವಿಯ ಬಳಿ ಓಡಿದ. ಆ ಕಾರ್ಗತ್ತಲೆಯಲ್ಲಿ ಆ ಮಿಣುಕು ದೀಪ ಸಾಲದಾಯಿತು. ಆಳುಗಳನ್ನು ಕೂಗಿದ. ಪೆಟ್ರೋಮ್ಯಾಕ್ಸ್ ಹಚ್ಚಿಸಿ ತರಿಸಲಾಯಿತು.

ಭಾವಿ ಕಟ್ಟೆಯ ಬಳಿ ಒಂದು ಕಾಗದ ಬಿದ್ದಿತ್ತು,—"ಅಣ್ಣಾ, ನನ್ನನ್ನು ಕ್ಷಮಿಸು. ನನಗೆ ಇದೇ ನಿಜವಾದ ಸೌಭಾಗ್ಯ" ಎಂತ ಬರೆದಿತ್ತು.

ಇಂತಹ ಸಂಸಾರದಲ್ಲಿ ಇರುವುದಕ್ಕಿಂತ, ಹಾಗೆ ಹೋಗುವುದೇ ಅವಳಿಗೆ ಪರಮ ಸೌಭಾಗ್ಯವಾಗಿತ್ತು.

. . . . .

# ಆಕಾಶವಾಣಿ

" ಇದೇನೊಂದ್ರೆ ? "

" ಏನು ? ಯಾವುದೇ ? "

" ಅಲ್ಲಾ, ಮನೇಗೆ ಬರೋದು ಯಾಕಿಷ್ಟು ಹೊತ್ತೂಂತ ? "

" ಹುಂ. ಸ್ವಲ್ಪ ಹೊತ್ತಾಯಿತು "

" ಅದೇ. ಯಾಕೆ ಅಂತ ನಾ ಕೇಳ್ತಿರೋದು "

" ಅದೇನೂ ಇಲ್ಲ. ಆಫೀಸ್‌ನಲ್ಲಿ ಸ್ವಲ್ಪ ಕೆಲ್ಸ ಜಾಸ್ತಿ ಇತ್ತು "

" ಅದೇನೊ ಅಂಥ ಕೆಲ್ಸ. ಯಾವತ್ತೂ ಇಲ್ಲದ್ದು "

" ಅಲ್ಲಾ ಕಣೆ. ಏನಿಲ್ಲಾ ಮನೇಗೆ ಬರೋಣ ಅಂತ ಹೊರಟೆ. ಅಷ್ಟರಲ್ಲಿ . . . . . . ಅಷ್ಟರಲ್ಲಿ . . . . . . ಯಾರೋ ಒಬ್ಬ ಹೆಂಗಸು ಮ್ಯಾನೇಜರ್ ಸಂಗಡ ಮಾತಾಡ್ಬೇಕೂಂತ ಬಂದಳು. ಅವಳು ಮಾತ್ನಾಡಿ ಬರೋವರ್ಗೂ ನಾನು ಅಲ್ಲೇ ಇರ್ಬೇಕಾಯ್ತು."

" ಚೆನ್ನಾಗಿದೆ. ಅವಳಷ್ಟಕ್ಕೆ ಅವಳು ಮಾತ್ನಾಡಿಕೊಳ್ತಿದ್ದಳು. ಅವಳಷ್ಟಕ್ಕೆ ಅವಳು ಹೋಗ್ತಿದ್ದಳು. ನೀವ್ಯಾಕೆ ಮಧ್ಯೆ ? "

" ಅಲ್ಲೇ. ಇದಕ್ಕೇ ನಿನಗೇನೂ ಗೊತ್ತಿಲ್ಲಾ ಅನ್ನೋದು. ಮ್ಯಾನೇಜ್ರು ಹೊರಡೋದಕ್ಕೆ ಮುಂಚೆ ನಾ ಹೊರಡೋಕೆ ಆಗತ್ತ್ಯೆ ? "

" ಸರಿ ಸರಿ. ಹೆಂಗಸು ! ನಿಮ್ಮ ಆಫೀಸಿಗೆ ಏಕೆ ಬಂದಿದ್ಲು ? "

" ಪಾಪ. ಮ್ಯಾನೇಜರ ಹತ್ತಿರ ಏನಾದ್ರೂ ಕೆಲಸ ಇದ್ದಿರ ಬಹುದು. "

" ಏನ್ಮಾತಾಡ್ತಿದ್ರು ? "

" ನನಗ್ಹೇಗೇ ಗೊತ್ತಾಗೋದು, ಅವರ ಪ್ರೈವೇಟ್ ರೂಂನಲ್ಲಿ ನಡೆದ ಮಾತೂಕತೆ. "

"ಏನೋ ಅಂತೆ. ನಾನೇನೋ ನಿಮ್ಮ ಆಫೀಸೂಂದ್ರೆ . . . . ಹೀಗೆಲ್ಲಾ ಅಂತ ತಿಳಿದುಕೊಂಡಿರಲಿಲ್ಲ."

"ಸಾಕು ಬಿಡೇ. ಯಾರೋ ಒಬ್ಬಳು ಬಂದ ಮಾತ್ರಕ್ಕೇ. ನಿಂದು ಸದಾ ವಕ್ರಬುದ್ಧಿ."

"ಸಾಕು ಬಿಡ್ರಿ. ಅಲ್ರಿ. ಅವಳಿಗೇನು ಕೆಲಸ ಅಷ್ಟು ಜನ ಗಂಡಸರ ಮಧ್ಯೆ. ಅದೂನೂ ರಹಸ್ಯವಾಗಿ, ಪ್ರೈವೇಟ್ ರೂಮಿನಲ್ಲಿ. ಆಂ."

"ನನಗೇನೂ ಗೊತ್ತಿಲ್ಲಾಂತ ಹೇಳೇ ಇದೇನಲ್ಲಾ"

"ನಿಮ್ಮ ಮಾನೇಜರ್ರಿಗೆ ಲಗ್ನ ಆಗಿದೆ ಯೇನ್ರಿ?"

"ತೆಗೆದೆಯಲ್ಲಾ ಏನೇನೋ. ಅದೆಲ್ಲಾ ನಿನಗ್ಯಾಕೇ. ಊರು ಉಸಾಬರಿ. ಕಂಡವರ ವ್ಯವಹಾರ. ನಡಿ. ಒಂದಿಷ್ಟು ಕಾಫೀನಾದ್ರು ಕೊಡ್ತೀಯಾ?"

೨

"ಏನೇ ಲೀಲಾ. ನಮ್ಮ ಮನೇಯವರ ಮ್ಯಾನೇಜರ್ರ ವಿಚಾರ ಗೊತ್ತೇನೆ ನಿನಗೆ?"

"ಯಾಕೆ, ಏನು ವಿಚಾರ? ನನಗೆ ಹೇಗೆ ತಿಳಿಯುತ್ತೆ"

"ಅಲ್ಲಾ ನೋಡು. ನಿಜವಾಗೂ ಬೇರೆಯವರಿಗೆ ಬಾಯಿ ಬಿಡಬಾರದು. ಹೋಗ್ಲಿ ಬಿಡು. ನಾನ್ಯಾಕೆ ಹೇಳಲಿ."

"ಛೇ, ಛೇ. ಏನು ಹೇಳೇ."

"ಏನಿಲ್ಲ. ಮತ್ತೆ ನೀನು ಯಾರಿಗಾದ್ರೂ ಹೇಳೀಯಾ"

"ನನ್ನಲ್ಲಿ ನಂಬಿಕೆ ಇಲ್ವೇನೆ. ನೀನು ಹೇಳಿದ ಏನೇನೋ ವಿಚಾರಾನ ನಾ ಯಾರಿಗಾದ್ರೂ ಹೇಳಿದೇನ?"

"ಅವರು ಯಾವುದೋ ಹುಡ್ಗಿ ಇಟ್ಕೊಂಡಿದಾರಂತೆ."

"ಆಂ. ಲಗ್ನವಾಗಿದೆ ಕಣೆ ಅವರಿಗೆ. ನಮ್ಮ ರಾಮರಾಯರ ಮಗಳು ವಿಶಾಲೀನ ಕೊಟ್ಟು."

"ಇದಕ್ಕೇ ನೋಡ್ರತ್ತೆ. ಮದುವೆ ಆದ್ರೆ ಏನಂತೆ ಆಫೀಸಿಗೆ ದಿನಾ ಬರ್‍ತಾಳಂತೆ."

"ಆಂ"

"ಮಾತೂಕತೆ ನಡೆಯುತ್ತಂತೆ."

"ಆಂ"

"ಅದೂ ಒಳಗಡೆಯಂತೆ. ಪ್ರೈವೇಟ್ ರೂಂನಲ್ಲಂತೆ. ಮತ್ತೆಲ್ಲಾದ್ರೂ ಬಾಯಿ ತಪ್ಪಿ ಹೇಳೀಯಾ."

೨

"ಇದೇನೇ ಗಂಗೂ. ಅಪರೂಪ ಆಗಿಬಿಟ್ಟೆಲ್ಲಾ. ಎಲ್ಲೂ ಇಷ್ಟು ದಿನ ಕಾಣಿಸಲೇ ಇಲ್ಲಾ."

"ಯಾಕೆ ಲೀಲಾ. ನೀನು ಮಾತ್ರ ನಮ್ಮ ಮನೇಕಡೆ ಬರೋದೆ ಇಲ್ಲ. ಬಂದಿದ್ರೆ ಕಂಡೇ ಕಾಣ್ತಿದ್ದೆ."

"ಹೌದು ಕಣೇ. ಕೈ ತುಂಬ ಕೆಲ್ಸ. ಬರ್‍ಲಿಕ್ಕೆ ಆಗ್ಲಿಲ್ಲ."

"ಮತ್ತೇನು ಸಮಾಚಾರ?"

"ಏನೂ ಇಲ್ಲ. ವಿಶಾಲಿ ಇದಾಳೇನೆ ಊರಲ್ಲಿ."

"ಅದೇನೆ ಹೀಗೆ ಕೇಳ್ತಿದೀಯಾ? ಮೊನ್ನೆತಾನೇ ಬಂದಳು ತವರುಮನೇಯಿಂದ."

"ಹಾಗಾದ್ರೆ ಇನ್ನೂ ಇಲ್ಲೇ ಇದಾಳೆ. ತವರುಮನೆಗೆ ಇನ್ನೂ ಹೋಗಿಲ್ಲ!"

"ಅದೇನು ಅವಳ ಗಂಡ ಟೂರ್ ಹೋಗಿದಾರಂತೆ. ನಾಲ್ಕು ದಿನ ಮಾತ್ರ ಅಷ್ಟೆ. ನಾಲ್ಕು ದಿನಕ್ಕೆ ಮಾತ್ರಕ್ಕೆ ಮತ್ತೆ ಊರಿಗೆ ಕಳಿಸ್ತಾರೆಯೆ?"

"ಟೂರು ಹೋಗ್ತಾರಂತೆ. ಅದೊಂದು ನೆವ!"

"ನೆವ! ಏನೇ ಹಾಗಂದ್ರೆ?"

" ನೀನು ಕೇಳ್ಲೀ ಇಲ್ವೇನು. ಅವರು . . . . . ಇಟ್ಕೊಂಡಿದಾರಂತೆ."

" ಆಂ. ನಿಜವಾಗಿ ?"

" ಸುಳ್ಳು ಹೇಳ್ತೀನಾ ನಾನು ?"

ಳ

" ಲೇ "

" . . . . . ."

" ಲೇ, ಲೇ "

" ಏನ್ರೀ ಕೂಗೋದು ?"

" ನಾನು ಏನೋ ಹೇಳಿದರೆ ನೀನೇನೋ ಮಾಡಿದಲ್ಲೇ "

" ಏನ್ಮಾಡ್ದೆ ?"

" ಏನ್ಮಾಡ್ದೆ ! ಇದಕ್ಕೇ ಹೇಳೋದು. ಹೆಂಗಸ ಬಾಯಿ ಅಂದರೆ ಮಡಿಕೆ ತೂತು ಅಂತ."

" ಅರೆರೆರೆರೇ. ಏನೋ ಹಚ್ಚಿಟ್ರಿಲ್ಲಾ. ಅದೇನ್ರೀ ನಾನು ಅಂಥಾದ್ದು ಮಾಡಿದ್ದು."

" ನಮ್ಮ ಮ್ಯಾನೇಜರು . . . ."

" ಸರಿ. ಅದೇ ಆ ಹುಡುಗಿ ವಿಷಯ ತಾನೇ ?"

" ಹುಂ. ಅದೇ ವಿಷಯಾನೇ. ನೀನು 'ಏನೋ ಮಾಡಿಬಿಟ್ಟೆ ಅಂದೆಸಲ್ಲಾ ಅದು. ಏನೋ ಕೆಲ್ಸದ ಮೇಲೆ ಯಾರೋ ಒಬ್ಬಳು ಬಂದಿದ್ದಳು ಅಂತ ನಾನು ಹೇಳಿದ್ರೆ, ನೀನು ಉಪ್ಪು ಕಾರ ಹಚ್ಚಿ ಮ್ಯಾನೇಜರ್ರ ಮೇಲೆ ಸುಳ್ಳು ಹೇಳಬೇಕೇ ?"

" ನಾನೇನು ಹೇಳಿದೆ ಅಂದ್ರೆ ?"

" ಮತ್ತೆ ಅದ್ಹೇಗೆ ಈ ಸುದ್ದಿ ಹೊರಬತ್ತು ?"

" ಪಕ್ಕದ್ಮನೆ ಲೀಲಾನ ಹತ್ತಿರ ನಿಮ್ಮ ಮ್ಯಾನೇಜರು ಎಂಥಾ ಜನ ಅಂತ ಕೇಳಿದೆ."

" ಆಮೇಲೆ "

" ಆಮೇಲೆ ಯಾರಿಗೂ ಹೇಳಬೇಡಾಂತ ಹೇಳಿ ಅವರ ಆಫೀಸಿಗೆ ಯಾರೋ ಹುಡುಗಿ ಹೋಗ್ತಾಳಂತೆ ಅಂದೆ. "

" ಸರಿ ಸರಿ, ಬಿಡು. ಆಮೇಲೆ ಅವಳೂನೂ ಯಾರಿಗೂ ಹೇಳಬಾರದೂ ಅಂತ ಹೇಳಿ ಎಲ್ರಾರ ಹತ್ರೂ ಹೇಳಿರಬೇಕು. ಈ ವಿಷಯ ಮ್ಯಾನೇಜರ್ ಹೆಂಡತಿ ಕಿವಿ ವರೆಗೂ ಹೇಗೋ ಹೋಗಿ ಅವರು ಮ್ಯಾನೇಜರನ್ನು ತರಾಟಿಗೆ ತೆಗೆದುಕೊಂಡ್ರೂಂತ ತೋರುತ್ತೆ. ಅವರು ಆಫೀಸಿಗೆ ಕಿಡಿಕಿಡಿಯಾಗಿ ಬಂದು ಆ ಸಿಟ್ನೆಲ್ಲಾ ನಮ್ಮೆಲ್ಲಾರ ಮೇಲೆ ಕಾರಿಬಿಟ್ರು. ಸುದ್ದಿ ಹೊರಡಿಸೋದರಲ್ಲಿ ಅದನ್ನು ಪ್ರಚಾರ ಮಾಡೋದರಲ್ಲಿ ನೋಡು, ನಿಮ್ಮನ್ನು ಬಿಟ್ಟರಿಲ್ಲಾ ಕಣೇ. "

. . . . . .

# ಸೋಮಪ್ಪನ ಸಂಪಾದನೆ

ಶ್ರಾವಣದ ಸಂಜೆ. ಸೋಮಪ್ಪನು ಆಗತಾನೆ ಸಾಗರದ ಸಂತೆಯನ್ನು ತೀರಿಸಿಕೊಂಡು ತನ್ನ ಹಳ್ಳಿಯ ಕಡೆ ಹಿಂತಿರುಗಿದ್ದನು. ಮಳೆಗಾಲವಾದುದರಿಂದ ಆದಷ್ಟು ಜಾಗ್ರತೆ ಊರು ಸೇರಬೇಕೆಂದು ಆಂದುಕೊಂಡಿದ್ದನು. ಒಂದು-ಒಂದೂವರೆ ಮೈಲಿ ದೂರ ನಡೆದು ಮಂಕಾಳಿಯ ಬಯಲನ್ನು ಸೇರುವ ಹೊತ್ತಿಗೆ ಸಂಜೆಯ ಜಡಿಮಳೆ ಸುರಿಯತೊಡಗಿತು.

ಮಲೆನಾಡಿನ ಮಳೆಗಾಲದ ನಡುಗಾಲ. ಗಾಳಿಯೋ ಹೇಳಲೇ ಸಾಧ್ಯವಿಲ್ಲ. ಒಂದೊಂದು ಚಣಕ್ಕೆ ಒಂದೊಂದು ಕಡೆಯಿಂದ ಬೀಸುತ್ತಿತ್ತು. ಕೊಡೆಯನ್ನು ಹೇಗೆ ಹಿಡಿದರೂ ತೀರದು. ಗಿಡ ಮರಗಳು ಗಾಳಿಯ ಸುಳಿಪಿಗೆ ಸಿಕ್ಕಿ ತೂಗಾಡಿ ಬೇಸತ್ತು ಸಾಕಪ್ಪ ಎನ್ನುತ್ತಿದ್ದುವು. ದೂರದ ಪೊದರುಗಳಿಂದ ಜೀರುಂಬೆಗಳು ಜೀರೆನ್ನುತ್ತ ಮಲೆನಾಡಿನ ಕಾರ್ಗಾಲದ ವೈಭವವನ್ನು ಹೊಗಳಿ ಹಾಡುತ್ತಿದ್ದುವು. ಅಲ್ಲಲ್ಲಿ ಒನ್ಮೊಮ್ಮೆ ಫಳಕ್ಕೆಂದು ಮಿಣುಂಬಳಗಳು ಹೊಳೆದು ಮರೆಯಾಗಿ ಕಣ್ಣಿಗೆ ಕಾಣದ ನಕ್ಷತ್ರಗಳ ನೆನಪನ್ನು ತರುತ್ತಿದ್ದುವು.

ಬೇರೆಯ ಕಾಲವಾಗಿದ್ದರೆ ಸೋಮಪ್ಪನು ಪ್ರಕೃತಿಯ ಈ ವೈಭವವನ್ನು ಕಂಡು ಸಂತೋಷಪಡುತ್ತಿದ್ದನು. ಆದರೆ ಇಂದು ಹಾಗಿರಲಿಲ್ಲ. ಅವನ ಮನಸ್ಸಿಗೂ ಕಾರ್ಮೋಡಗಳು ಮುಸುಕಿದ್ದವು. ಅಲ್ಲೂ ಬಿರುಗಾಳಿ ಮಳೆ ಮಿಂಚುಗಳ ಆರ್ಭಟ ನಡೆದಿತ್ತು. ಅದರ ಮುಂದೆ ಪ್ರಕೃತಿಯ ಈ ವೈಭವ ಅವನ ಕಣ್ಣಿಗೆ ಕಾಣಿಸದು. ಮೈ ಎಲ್ಲ ಮಳೆಯ ಇರಿಸಿಲಿಗೆ ಸಿಕ್ಕಿ ತೋಯ್ದು ಚಳಿಯಿಂದ ನಡುಗ ತೊಡಗಿದರೂ ಅವನಿಗೆ ಅದರ ಪರಿವೆಯೇ ಇರಲಿಲ್ಲ. ಸಾಗರದ

ಸಾಹುಕಾರರ ಅಂದಿನ ಕಡುನುಡಿಗಳನ್ನು ಕೇಳಿ ನೊಂದು ಮನಸ್ಸು ಭಾರವಾಗಿತ್ತು. ಅಭ್ಯಾಸದ ಬಲದಿಂದ ಅವನ ಕಾಲುಗಳು ಮುಂದು ವರಿಯುತ್ತಿದ್ದುವು! ಕೈಗಳು ಮಳೆಗೆ ಇದಿರಾಗಿ ಕೊಡೆಯನ್ನು ಹಿಡಿದಿದ್ದುವು.

ಈಗ ಮೂರು ನಾಲ್ಕು ವಾರಗಳಿಂದ ಈಚೆಗೆ ಅವನು ಹಾಗೇ ಏಕೋ ಒಂದು ತೆರನಾಗಿದ್ದನು. ಮುಖದಲ್ಲಿ ಮೊದಲಿನ ಗೆಲುವು ಇರಲಿಲ್ಲ. ತುಟಿಗಳಲ್ಲಿ ನಗೆಯು ಇರಲಿಲ್ಲ. ಕಣ್ಣುಗಳು ಮಂದ ವಾಗಿದ್ದುವು. ಹುಬ್ಬುಗಳು ಯಾವಾಗಲೂ ಗಂಟಿಕ್ಕಿಕೊಂಡು ಅವುಗಳ ಮಧ್ಯ ಹಣೆಯಮೇಲೆ ಎರಡು ಗೀರುಗಳು ಸ್ಪಷ್ಟವಾಗಿ ಮೂಡಿದ್ದುವು. ಯಾವಾಗಲೂ ಯೋಚನಾಮಗ್ನನಾಗಿರುತ್ತಿದ್ದನು.

ಮಾಘ ಬಹುಳ ಅಮಾವಾಸ್ಯೆಗೆ ಇನ್ನೂ ಆರು ತಿಂಗಳುಗಳು ಉಳಿದಿವೆ. ಆರೇ ತಿಂಗಳು! ಆ ಅಮಾವಾಸ್ಯೆ ಒಳಗಾಗಿ ಅವನು ಸಾಗರದ ಸಾಹುಕಾರರ ಸಾಲದ ಬಗ್ಗೆ ಒಂದು ವ್ಯವಸ್ಥೆ ಮಾಡದಿದ್ದರೆ ಅವರು ಖಂಡಿತ ದಾವ ಹಾಕುವುದಾಗಿ ಹೇಳಿದ್ದರು. ಆಗ ಅವನ ಅಡಿಕೆ ತೋಟ ಅವರ ಪಾಲಾಗುವುದೇ ಸರಿ. ಆಗ?

ಮುಂದೆ ನಾಲ್ಕು ಮಾರೂ ದಾರಿ ಅವನಿಗೆ ಕಾಣುತ್ತಿರಲಿಲ್ಲ. ಅವನಾದರೂ ಜೀವನದ ಬಿರುಗಾಳಿಗೆ ಸಿಕ್ಕಿ, ಅಲ್ಲಾಡಿ, ಬೇಸತ್ತಿದ್ದನು. ಅದೇ ಎರಡು ವರ್ಷಗಳ ಹಿಂದೆ ತಂದೆ ತೀರಿಕೊಂಡಿದ್ದರು. ಕಷ್ಟ ಯಾವಾಗಲೂ ಒಂದೇ ಬರುವುದಿಲ್ಲ. ಒಂದರಮೇಲೊಂದು ಸಾಗರದ ತೆರೆಗಳಂತೆ ಬರುತ್ತವೆ. ತಂದೆಯ ವರ್ಷಾಂತಿಕವಾಗುವುದರೊಳಗಾಗಿ ಹೆಂಡತಿ ಚೊಚ್ಚಲ ಬಸಿರಿನಲ್ಲಿ ಸತ್ತು ತೀರಿಹೋದಳು. ಇವರಿಬ್ಬರ ಕರ್ಮಾಂತಿಕಗಳನ್ನು ತೀರಿಸುವ ವೇಳೆಗೆ, ಸೋಮಪ್ಪನು ಸಾಗರದ ಸಾಹುಕಾರರಲ್ಲಿ ಸಾಲಗಾರನಾಗಿದ್ದನು. ಸಾಲ ಮಾಡುವುದಕ್ಕೆ ಅವನಿಗೆ ಮನಸ್ಸಿರಲಿಲ್ಲ. ಆದರೂ ಪರಿಸ್ಥಿತಿಗೆ ಕಟ್ಟುಬಿದ್ದು, ಅವನು ಸಾಲದ ಹೊರೆಯನ್ನು ಹೊರಲೇಬೇಕಾಯಿತು.

ಸಾಲ ತಂದು ವರುಷಗಳೆರಡು ಕಳೆದಿದ್ದರೂ, ಅದರ ಬಡ್ಡಿ ತೀರಿಸುವುದರಲ್ಲಿ ಅವನು ಬಡವನಾದನೇ ಹೊರತು ಅಸಲಿನಲ್ಲಿ ಕಾಸೂ ಕಡಿಮೆಯಾಗಿರಲಿಲ್ಲ. ಈಗ ಮನೆಯಲ್ಲಿ ಉಳಿದವರು ಇಬ್ಬರೇ! ವಯಸ್ಸಾದ ತಾಯಿ, ಸಾಲದ ಭಾರದಿಂದ ಕುಗ್ಗಿದ ತಾನು. ಮೊದಲಿನ ವರ್ಷದಲ್ಲಿ ಸೋಮಪ್ಪನ ಮನಸ್ಸು ಇಷ್ಟು ಕುಗ್ಗಿರಲಿಲ್ಲ. ಹೇಗಾದರೂ ಸಾಲ ತೀರಿಸುವೆನೆಂದುಕೊಂಡಿದ್ದನು. ಆದರೆ ಅಡಿಕೆಯ ದರ ಅಷ್ಟು ಜಾಗ್ರತೆ ಕಡಿಮೆಯಾಗಿ ಹೋಗುವುದೆಂದು ಅವನು ಎಣಿಸಿರಲಿಲ್ಲ. ಈ ವರ್ಷವಂತೂ ಅವನು ಮನುಷ್ಯನೇ ಆಗಿರಲಿಲ್ಲ. ಯಾಕೆಂದರೆ ತಿಂಗಳ ಮೊದಲೇ ಕೊಳೆರೋಗದಿಂದ ಸೋಮಪ್ಪನ ತೋಟದಲ್ಲಿ ಅಡಿಕೆ ಕಾಯಿ ಒಂದೂ ಉಳಿದಿರಲಿಲ್ಲ! ಆಳು ಕಾಳು ಗಳಿಗೆ, ನೆರೆಹೊರೆಯವರಿಗೆ ದಮ್ಮಯ್ಯ ಹಾಕಿ ಅಡಿಕೆಗೆ ಕೊಟ್ಟೆ ಕಟ್ಟಿಸಿಯೂ ಇದ್ದನು. ಸಾಗರದ ಸರಕಾರೀ ವ್ಯವಸಾಯದ ಆಫೀಸಿನಿಂದ ಕೊಳೆ ರೋಗದ ಔಷದ ಸಾಲ ತಂದು ಹಾಕಿಸಿಯೂ ಇದ್ದನು. ಆದರೇನು ಅದೃಷ್ಟವಿಹೀನ! ಇಷ್ಟು ಪ್ರಯತ್ನಿಸಿಯೂ ಅಡಿಕೆ ಮುಕ್ಕಾಲು ಮೂರು ವೀಸಪಾಲು ಕೊಳೆಯ ರೋಗದಿಂದ ಉದಿರಿಯೇ ಹೋಗಿತ್ತು. ಈಚೆಗೆ ಒಂದು ದಿನವೂ ಅವನು ಕಣ್ಣಿನಲ್ಲಿ ನೀರು ತುಂಬಿಸದೆ ತೋಟದ ಕಡೆ ಹೋಗಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಆಳು ಕಾಳು, ನೆರೆ ಹೊರೆಯವರಿಗೂ, ಕಂದಾಯ ಕೊಡುವುದನ್ನು ಕೊಟ್ಟು ಸಂಸಾರ ಸಾಗಿಸುವುದೇ ಕಷ್ಟವಾಗಬಹುದೆನಿಸಿರುವಾಗ, ಸಾಲದ ಬಡ್ಡಿಗೆ ದುಡ್ಡು ತರುವುದೆಲ್ಲಿಂದ? ಬಡ್ಡಿಗಾಗಿ ಬೇರೆ ಸಾಲ ಮಾಡುವನೆ? ಮಾಡಿಕೊಂಡುದೇ ಮಾರಿ ಎನಿಸಿರುವಾಗ, ಮೈಯಲ್ಲಿ ಹುಣ್ಣು ಮಾಡಿಕೊಂಡಂತೆ ಅದು. ಅಥವಾ ಏನಾದರೂ ಅಡವು ಮಾಡಿ ಬಡ್ಡಿ ಕೊಡುವ ಎಂದರೆ ಮನೆಯಲ್ಲಿ ಇದ್ದುದಾದರೂ ಏನು? ಕಳೆದ ಕೆಲವು ದಿನಗಳಿಂದ ಇದನ್ನೆಲ್ಲ ಯೋಚಿಸಿ, ಯೋಚಿಸಿ ಸೋಮಪ್ಪನ ತಲೆ ಭಾರವಾಗಿತ್ತು. ಮುಂದಾಗುವುದನ್ನು ಹಲವು ವಿಧದಿಂದ ಊಹಿಸಿ ತಲೆ ನೋವು ಬಂದಿತ್ತು. ಒಮ್ಮೆ ಸಾಲಕ್ಕೆ

ಜಮಿಾನು ಹೋದರೂ, ಅದನ್ನೆ ತಾನು ಗೇಣಿಗೆ ಏಕೆ ತೆಗೆದುಕೊಳ್ಳ ಬಾರದೆಂದು ಯೋಚಿಸಿಯೂ ಇದ್ದನು. ಆದರೆ ಅರಸಾಗಿ ಆಳಿದಲ್ಲಿ ಆಳಾಗಿ ದುಡಿಯಲು ಅವನ ಮನಸ್ಸು ಒಪ್ಪಲಿಲ್ಲ. ಅದರಲ್ಲೂ ಇಂದು ಸಾಹುಕಾರರಾಡಿದ ಮಾತುಗಳನ್ನು ಕೇಳಿದ ಮೇಲೆ ಖಂಡಿತ ಅವರ ಗೇಣಿಗನಾಗಬಾರದೆಂದು ನಿಶ್ಚಯಿಸಿದ್ದನು.

ಅಂದು ತಾನು ಪತ್ರಕ್ಕೆ ಹೆಬ್ಬೆಟ್ಟೊತ್ತುವಾಗ ಅವರಾಡಿದ ಭರವಸೆಯ ಮಾತು, ನಗೆಯ ನೋಟ, ಕೊಡಿಸಿದ ಕಾಫಿ ತಿಂಡಿ ಇವುಗಳ ನೆನಪು ತಂದುಕೊಂಡು ಹಲವುಬಾರಿ ಹಲ್ಲುಕಚ್ಚಿ ಮುಷ್ಟಿ ಬಿಗಿದಿದ್ದನು. ಈಗ ಮುಂದೇನು? ಎಂಬುದೇ ಅವನ ಮುಂದಿರುವ ದೊಡ್ಡ ಪ್ರಶ್ನೆ. ಮಲೆನಾಡಿನ ಆ ಸಂಜೆಯ ಜೋರು ಮಳೆಯಲ್ಲಿ ಮುಂದೆ ಮಾರು ರಸ್ತೆಯೂ ಅವನ ಕಣ್ಣಿಗೆ ಕಾಣಿಸುತ್ತಿರಲಿಲ್ಲ. ಅದರಂತೆ ಸೋಮಪ್ಪನ ಮನಸ್ಸಿನ ಮುಂದೆಯೂ ಕತ್ತಲು ಕವಿದಿತ್ತು. ಕಾರ್ಗಾಲದ ಆ ಕತ್ತಲನ್ನು ಅವನು ನಿಧಾನವಾಗಿ ಭೇದಿಸಿಕೊಂಡು ಮುಂದುವರಿವಂತೆ, ಮನಸ್ಸಿನಲ್ಲೂ ಒಂದು ದಾರಿ ಹುಡುಕುತ್ತಿದ್ದನು. ಯೋಚನೆಯಲ್ಲಿ ದಾರಿ ಸಾಗಿದುದರ ಪರಿವೆಯೇ ಇಲ್ಲದೆ ಅವನು ಊರ ಹೊರಬಾಗಿಲ ಬಳಿಗೆ ಬರುವಷ್ಟರಲ್ಲಿ ಮಳೆಯೂ ನಿಂತು ಅವನ ಸುತ್ತುಮುತ್ತಲಿನ ಪ್ರಪಂಚ ಒಂದು ಸ್ಥಿಮಿತಕ್ಕೆ ಬಂದಿತ್ತು. ಅವನೂ ಮನೆಯ ಬಳಿಗೆ ಬರುವುದರೊಳಗಾಗಿ ಒಂದು ನಿರ್ಧಾರಕ್ಕೆ ಬಂದಿದ್ದನು. ಅದೊಂದಲ್ಲದೆ ತನಗೆ ಬೇರೆ ಯಾವ ದಾರಿಯೂ ಇಲ್ಲವೆಂದು ಅವನು ಮನಗಂಡಿದ್ದನು. ಆದರೂ ಅದನ್ನು ಕಾರ್ಯರೂಪಕ್ಕೆ ಇಳಿಸಲು ಅವನ ಮನಸ್ಸು ಸ್ವಲ್ಪ ಹಿಂಜರಿಯುತ್ತಿತ್ತು. ಯಾಕೆಂದರೆ ಹೆತ್ತ ತಾಯಿಗೆ ನೋವಾದೀತಲ್ಲಾ, ದುಃಖವಾದೀತಲ್ಲಾ, ಕಷ್ಟವಾದೀತಲ್ಲಾ ಎಂದು. ಅವಳಿಗೆ ತನ್ನನ್ನು ಬಿಟ್ಟರೆ ಬೇರೆ ಯಾರಿರುವರು ಎಂಬ ಯೋಚನೆ ಬಂದೊಡನೆಯೇ ಸೋಮಪ್ಪನು ತನ್ನ ನಿರ್ಧಾರವನ್ನು ಕೊನೆಗಾಣಿಸಲು ಹಿಂಜರಿಯುತ್ತಿದ್ದನು. ಆದರೆ ಬೇರೆ ದಾರಿ ಏನಿದೆ? ತನ್ನ ನಿಶ್ಚಯ ದಂತೆ ನಡೆಯದಿದ್ದರೆ ಈ ಕಷ್ಟದಿಂದ ಪಾರಾಗುವುದಾದರೂ ಹೇಗೆ?

ಹೇಗಾದರೂ ತನ್ನ ಸಿದ್ಧಾಂತದಿಂದ ಅಚಲನಾಗಕೂಡದೆಂದು ನಿಶ್ಚಯಿಸಿದನು. ಅಷ್ಟಕ್ಕೆ ಸರಿಯಾಗಿ ಅವನು ಮನೆಯ ಹೊಸ್ತಿಲಿನಮೇಲೆ ಕಾಲಿರಿಸಿದ್ದನು. ಬಾಗಿಲನ್ನು ತೆಗೆ ಎಂದು ತಾಯಿಯನ್ನು ಕೂಗಿ ಕರೆದನು.

o o o o o

" ಅಮ್ಮಾ "

" ಏನೋ ಸೋಮು ಅದೂ "

" ಅಮ್ಮಾ, ಒಂದು ಮಾತು ಹೇಳಬೇಕೆಂದಿದೆ. ಹೇಳದಿದ್ದರೆ ವಿಧಿಯಿಲ್ಲ. ನೀನು ಮಾತ್ರ ಬೇಜಾರು ಮಾಡಕೂಡದು . . . . "

" ಏನು ಹೇಳಪ್ಪ. ಈ ಕಷ್ಟನಷ್ಟಗಳ ಜೊತೆಗೆ ಇನ್ನೇನು ಬಂತೋ ಹೇಳು. "

ಇಳೀ ವಯಸ್ಸಿನಲ್ಲಿ ಒಂದರಮೇಲೊಂದು ಕಷ್ಟನಷ್ಟಗಳನ್ನು ಇದಿರಿಸಿ-ಸಹಿಸಿ ಗಂಗಮ್ಮ-ಸೋಮಪ್ಪನ ತಾಯಿಗೆ ಪ್ರತಿಕ್ಷಣದಲ್ಲೂ ಏನಾದರೊಂದು ಕಷ್ಟದ ನಿರೀಕ್ಷೆ ಮಾಡುವುದೇ ಆಗಿತ್ತು.

" ಅಮ್ಮಾ, ಅಡಿಕೆಯಂತೂ ಕೊಳೆ ರೋಗದಿಂದ ಎಲ್ಲಾ ಉದುರಿಹೋಯ್ತು. ಈ ವರ್ಷ ಕಂದಾಯ ಮತ್ತು ಮನೆ ಖರ್ಚು ಹುಟ್ಟುವುದೇ ಕಷ್ಟ. ಹೀಗಿರುವಾಗ ಸಾವುಕಾರರ ಬಡ್ಡಿ ಕೊಡುವುದಾದರೂ ಹೇಗೆ ಅನ್ನಿಸಿದೆ . . . . "

" . . . . . . "

" ಕೊನೆ ಪಕ್ಷ ಬಡ್ಡೀನಾದ್ರೂ ಕೊಡದಿದ್ರೆ, ಅಸಲಿನಲ್ಲಿ ಸ್ವಲ್ಪ ಕೊಟ್ಟು ಪತ್ರಕ್ಕೆ ಪರಾಕಟ್ಟದಿದ್ರೆ ಅವರಂತೂ ಖಂಡಿತ ದಾವ ಮಾಡಿ ಜಮೀನು ಹರಾಜು ಮಾಡುವುದೇ ಸರಿ. ಇವತ್ತು ಹಾಗೆಂತ ಅವರು ಖಂಡಿತ ಹೇಳಿದಾರೆ. ಏನು ಮಾಡಲೂ ತಿಳಿಯದು. "

" ಏನು ಮಾಡಲಪ್ಪ ನಾನು. ನನ್ನ ಕೈಲೇನಾದರೂ ಇದೆಯೆ? ಅವರು ಹೋದಾಗಲೇ ಇದ್ದುಬದ್ದುದೆಲ್ಲ ಖರ್ಚಾಗಿಹೋಯ್ತು. ನಿನ್ನ ಮನಸ್ಸಿಗೆ ಬಂದಹಾಗೆ ಮಾಡು. "

ಗಂಗಮ್ಮ ಅಡಿಕೆಯೊಂದನ್ನು ಕತ್ತರಿಸಿಕೊಂಡು ಬಾಯಿಗೆ ಹಾಕಿಕೊಳ್ಳುತ್ತಾ ಹೇಳಿದಳು.

"ಅಮ್ಮಾ ನಾನೊಂದು ಮಾತು ಹೇಳಲೆ? ಹೇಗೂ ನಾನು ನಿಶ್ಚಯಮಾಡಿರುವೆ. ಈ ಸಲ ಅಡಿಕೆ ಸುಗ್ಗಿ ಮಾಡುವುದು ಅಷ್ಟು ಕಷ್ಟವೇನೂ ಇಲ್ಲ. ಅಲ್ಲಿದ್ದುದೂ ಅಷ್ಟರಲ್ಲಿಯೇ ಇದೆ. ಏನೋ ಒಂದೆರಡು ಕೊನೆ ಕಿತ್ತುಹಾಕಿದರೆ ಆಯ್ತು. ಆಚೆಮನೆ ರಾಮಣ್ಣಗೆ ಸ್ವಲ್ಪ ಸಹಾಯ ಮಾಡು ಅಂತ ಬೇಕಾದರೆ ಹೇಳುವೆ. ನೀನೂ ಸ್ವಲ್ಪ ಮೇಲ್ವಿಚಾರಣೆ ಮಾಡಿಕೊಂಡರೆ ಸರಿ . . . ."

"ನೀನು . . . . ?"

"ಮೊಗದೂರ ರಾಮಕೃಷ್ಣ ಮೊನ್ನೆ ಬಂದಾಗ ಹೇಳಿಹೋಗಿರುವ. ಬೇಗಳೂರಾಗೆ ಹೋಟಲಲ್ಲಿ ಕೆಲಸ ಸಿಕ್ಕುತ್ತಂತೆ. ಊಟ ತಿಂಡಿ ಎಲ್ಲ ಕಳೆದು ತಿಂಗಳಿಗೆ ೩೦-೪೦ ರೂಪಾಯಿ ಸಂಬಳವಂತೆ. ಅಲ್ಲಿಗೆ ಹೋಗಿ ಏನಾದರೂ ಕೆಲಸ ಮಾಡಿದರೆ ಸಾಧು ಮಾಸದೊಳಗೆ ಒಂದುನೂರು ರೂಪಾಯಿ ಹೇಗೂ ಉಳಿಸಬಹುದೂ ಅಂತ ಯೋಚಿಸಿರುವೆ" ಎಂದನು.

ಹೇಳಬೇಕಾದುದನ್ನೆಲ್ಲಾ ಹೇಳಿ ಹೇಗೋ ತನ್ನ ತಾಯಿಯನ್ನು ಸಮಾಧಾನ ಪಡಿಸಿ ಒಪ್ಪಿಸಿದನು. ಮಾರನೆಯ ದಿನವೆ ಹೊರಡಬೇಕೆಂದು ನಿಶ್ಚಯಿಸಿದನು. ಆ ರಾತ್ರಿ ಅವನಿಗೆ ನಿದ್ದೆ ಸರಿಯಾಗಿ ಬರಲಿಲ್ಲ. ಏನೇನೋ ಕನಸುಗಳು. ಸುಪ್ತ ಮನಸ್ಸಿನ ಆಸೆಗಳೆಷ್ಟೋ ಹೊರ ಬಂದು ವಿಹರಿಸುತ್ತಿದ್ದವು.

ಗಂಗಮ್ಮನಿಗೆ ನಿದ್ದೆಯ ಸುಳಿವೇ ಇಲ್ಲ. ರಾತ್ರಿಯೆಲ್ಲವೂ ನಾಲ್ಕು ಬಾರಿ ಎದ್ದು ಕತ್ತಲಲ್ಲೇ ಎಲೆ ಅಡಿಕೆಯನ್ನು ಹಾಕಿದ್ದಳು ಅವಳು.

o o o o o

ಸಾಗರದಿಂದ ಶಿವಮೊಗ್ಗಾಕ್ಕೆ ಬಸ್ಸಿನ ಪ್ರಯಾಣ ಸೋಮಪ್ಪನಿಗೆ ಅಷ್ಟೇನೂ ಕಷ್ಟವಾಗಲಿಲ್ಲ. ಆದರೆ ಕುಂಸಿಯ ಹತ್ತಿರ ರಸ್ತೆಯ

ಮೇಲಿದ್ದ ಕುದುರೆ ಲಾಳ ಒಂದು ಟೈರಿಗೆ ತಗಲಿದುದರ ಫಲವಾಗಿ, ಬಸ್ಸು ಶಿವಮೊಗ್ಗಾ ತಲುಪಲು ಎರಡು ತಾಸು ಹೆಚ್ಚಾಯಿತು. ಅಷ್ಟರಲ್ಲಿ ಬೆಂಗಳೂರಿಗೆ ಹೋಗುವ ರೈಲು ಹೋಗಿಯೂ ಬಿಟ್ಟಿತ್ತು. ಆದುದರಿಂದ ಸೋಮಪ್ಪನು ರೈಲ್ವೆ ಸ್ಟೇಷನ್ನಿನ ಕಟ್ಟೆಯಮೇಲೆ ಕಳೆಯಬೇಕಾಯ್ತು.

ಬೆಳಿಗ್ಗೆ ರೈಲಿನಲ್ಲಿ ಹೊರಟು ರಾತ್ರಿ ಬೆಂಗಳೂರನ್ನು ಸೇರಿದನು. ಹೊಸಬನೊಬ್ಬನು ರಾತ್ರಿ ೯-೧೦ ಘಂಟೆಗೆ ಬೆಂಗಳೂರು ಸಿಟಿ ರೈಲ್ವೆ ಸ್ಟೇಷನ್ನಿನಲ್ಲ ಇಳಿದಾಗ ಅವನ ಅವಸ್ಥೆ ಹೇಳತೀರದು. ಸೋಮಪ್ಪನು ಸಾಗರಕ್ಕಿಂತ ದೊಡ್ಡದಾದ ಊರನ್ನೇ ಕಂಡವನಲ್ಲ! ಆ ರಾತ್ರಿ ಆ ದೀಪಗಳ ಸಾಲು, ಜನರ ಗಡಿಬಿಡಿ, ಕೂಲಿಗಳ ಕೂಗಾಟ-ಕಿತ್ತಾಟ ಇವುಗಳನ್ನು ಕಂಡು ಅವನು ಬೆರಗಾಗಿ, ಬೆಪ್ಪನಂತೆ ನಿಂತನು. ಪ್ರಯಾಣಿಕರೆಲ್ಲಾ ತಮ್ಮತಮ್ಮ ಸಾಮಾನುಗಳನ್ನು ಇಳಿಸಿಕೊಂಡು ಇಳಿಯುವುದನ್ನು ಕಂಡು, ತಾನೂ ತನ್ನ ಹಾಸಿಗೆಯ ಸುರುಳಿಯನ್ನು ಬಗಲಲ್ಲಿ ಅವುಚಿಕೊಂಡು ಕೆಳಗಿಳಿಯುವಾಗ ಬಾಗಿಲು ಹಿಡಿಸದೆ ತೊಂದರೆ ಪಟ್ಟನು. ಅಷ್ಟರಲ್ಲಿ ಕರಿಯಂಗಿಯ ಕೂಲಿಯವನೊಬ್ಬನು ಅವನ ಕೈಯಿಂದ ಹಾಸಿಗೆಯನ್ನು ಕಿತ್ತು ಕೆಳಗೆ ಹಾಕಿದನು. ಇವನೂ ಅದರ ಹಿಂದೆ ಹಾರಿದನು!

ಇವನ ರೂಪವನ್ನು ಕಂಡೋ ಏನೋ ಯಾರೂ ಮಾತನಾಡಿಸಲಿಲ್ಲ. ಹಾಸಿಗೆಯನ್ನು ಎತ್ತಿಕೊಂಡು ಮುಂದೆಸಾಗುವ ಗಡಿಬಿಡಿಯಲ್ಲಿ ಒಂದೆರಡು ಜನರನ್ನು ಎಡವಿ ಅವರಿಂದ ಥೂ ಗುಟ್ಟಿಸಿಕೊಂಡುದೂ ಆಯಿತು. ಅಂತೂ ಜನರ ಗುಂಪನ್ನು ದಾಟಿ ಸ್ವಲ್ಪ ಆರಾಮು ಸ್ಥಳಕ್ಕೆ ಬಂದನು. ಮನೆಯಿಂದ ಹೊರಡುವ ಮೊದಲು ಮೊಗದೂರಿನ ರಾಮಕೃಷ್ಣನ ವಿಳಾಸವನ್ನು ಗೊತ್ತುಮಾಡಿಕೊಂಡು ಬಂದಿದ್ದನಾದರೂ ಈ ರಾತ್ರಿಯಲ್ಲಿ ಅವನನ್ನು ಹುಡುಕಿಕೊಂಡು ಹೋಗುವದು ಆಗದ

ಮಾತೆಂದು ಎಣಿಸಿ ರಾತ್ರಿಯನ್ನು ಸ್ಟೇಷನ್ನಿನಲ್ಲಿ ಕಳೆದು ಬಿಡುವುದೆಂದು ನಿಶ್ಚಯಿಸಿದನು.

ಮೈಸೂರು ರೈಲು ಹೊರಟುಹೋಗುವವರೆಗೂ ಅವನಿಗೆ ಎಲ್ಲಿ ಮಲಗಬೇಕೆಂಬುದೇ ಹೊಳೆಯಲಿಲ್ಲ. ಅಲ್ಲೇ ಹಾಕಿದ್ದ ಒಂದು ಬೆಂಚಿನಮೇಲೆ ಕುಳಿತು ಸುಮಾರು ಹನ್ನೆರಡು ಗಂಟೆಯುಮೇಲೆ ಅಲ್ಲೇ ತನ್ನ ಹಾಸಿಗೆಯ ಸುರುಳಿಯನ್ನು ಬಿಚ್ಚಿ ಮಲಗಿದನು.

ಬಳೆಪೇಟೆಯ ಯಾವುದೋ ಒಂದು ಸಂದಿಯಲ್ಲಿರುವ ರಾಮಕೃಷ್ಣನ ರೂಮನ್ನು ಗೊತ್ತಿಸುವುದು ಸುಲಭಸಾಧ್ಯವಾದುದಲ್ಲ. ಯಾರನ್ನು ವಿಚಾರಿಸಿದರೂ ತಮಗೆ ತಿಳಿಯದೆಂದರು. ಕೆಲವರು ಇವನ ಪ್ರಶ್ನೆಯನ್ನು ಕೇಳಿದಾಗ ದುರುದುರನೆ ಇವನನ್ನು ನೋಡಿ ಹೊರಟುಹೋದರು. ಇವನಿಗೆ ತಾನು ಮಾಡಿದ ತಪ್ಪು ಏನೆಂಬುದೂ ತಿಳಿಯಲಿಲ್ಲ! ಅಂತೂ ಹೇಗೋ ಮಾಡಿ ಸುಮಾರು ಎರಡು ಗಂಟೆಯ ವೇಳೆಗೆ ರಾಮಕೃಷ್ಣನ ರೂಮನ್ನು ಪತ್ತೆ ಹಚ್ಚಿದನು. ಆದರೆ ಇವನು ಅಲ್ಲಿಗೆ ಹೋದಾಗ ಬಾಗಿಲಿಗೆ ಬೀಗ ಹಾಕಿತ್ತು. ತಾನು ಬಂದ ಸ್ಥಳ ಸರಿಯಾದುದು ಹೌದೋ ಅಲ್ಲವೋ ಎಂಬ ಅನುಮಾನವೂ ಒಮ್ಮೆ ಬಂತು. ತನಗೆ ಆ ರೂಮನ್ನು ತೋರಿಸಿದವರನ್ನು ಮತ್ತೊಮ್ಮೆ ವಿಚಾರಿಸಿ ನಿಶ್ಚಯ ಮಾಡಿಕೊಳ್ಳುವ ಎಂದರೆ, ಅವರನ್ನು ಎಲ್ಲಿ ಹುಡುಕುವುದು? ಸಂಜೆ ಆರು ಘಂಟೆಯಾಗುವ ಹೊತ್ತಿಗೆ ಇವನಿಗೆ ತೀರಾ ನಿರಾಸೆಯಾಯಿತು. ರಾಮಕೃಷ್ಣನು ಸಿಗದೆ ಹೋದರೆ ತನ್ನ ಗತಿ ಏನೆಂದು ಯೋಚಿಸಿ ಮನಸ್ಸಿನಲ್ಲಿ ಭಯವೂ ಕಳವಳವೂ ಮೂಡಿದುವು. ಸಂಜೆ ಎಂಟು ಘಂಟೆಯ ಹೊತ್ತಿಗೆ ಯಾರೋ ಒಬ್ಬರು ಬಂದು, ರೂಮಿನ ಬಾಗಿಲಿಗೆ ಬೆನ್ನುಕೊಟ್ಟು ಕುಳಿತಿದ್ದ ಇವನನ್ನು ಎಬ್ಬಿಸಿ ಬಾಗಿಲು ತೆರೆದರು. ಅಪರಿಚಿತರಾದವರು ಬಂದು ರೂಮಿನ ಬಾಗಿಲನ್ನು ತೆಗೆದು ಒಳಗೆ ಹೋಗುವುದನ್ನು ಸೋಮಪ್ಪನು ಕಂಡು ತೀರಾ ಧೈರ್ಯಗುಂದಿದನು. ತಾನು ಇದುವರೆವಿಗೂ ಯಾರದೊ

ರೂಮಿನ ಬಾಗಿಲು ಕಾದೆನೆಂಪೆನಿಸಿ ಅಳು ಬಂದಂತಾಯಿತು. ತನ್ನ ಅಂದಿನ ಅನುಭವವನ್ನು ನೆನೆದು ಹೆದರುತ್ತಾ ಅವರನ್ನು ರಾಮುಕೃಷ್ಣನ ವಿಳಾಸ ವಿಚಾರಿಸಿದನು. ರಾಮುಕೃಷ್ಣನು ಅದೇ ರೂಮಿನಲ್ಲಿರುವನೆಂದು ಅವರು ಹೇಳಿದಮೇಲೆ ಇವನಿಗೆ ಜೀವ ಬಂದಂತಾಯಿತು. ಅವರು ಇವನನ್ನು ಒಳಗೆ ಕರೆದು ಕುಳ್ಳಿರಿಸಿದರು. ಎಂಟು ಅಡಿ ಚಚ್ಚೌಕದ ಆ ರೂಮಿನಲ್ಲಿ ಎಂಟು ಹಾಸಿಗೆಯನ್ನು ನೋಡಿ ಸೋಮಪ್ಪನಿಗೆ ಆಶ್ಚರ್ಯವೆನಿಸಿತು.

ಒಂಭತ್ತು ಘಂಟೆಯ ಹೊತ್ತಿಗೆ ರಾಮುಕೃಷ್ಣನು ತನ್ನ ರೂಮಿಗೆ ಬಂದನು. ಸೋಮಪ್ಪನನ್ನು ಕಂಡು ಅವನ ಕಣ್ಣುಗಳು ಆಶ್ಚರ್ಯದಿಂದ ಅರಳಿದುವು. ಸೋಮಪ್ಪನಿಗೆ ಪೂರ್ತಿ ಜೀವ ಬಂದಂತಾಯಿತು. "ಮಹಾರಾಯ ನಿನ್ನ ಹುಡುಕಿಕೊಂಡು ಬರುವುದು ಒಂದು ದೊಡ್ಡ ಬ್ರಹ್ಮಯಜ್ಞ ಮಾಡಿದಂತಾಯಿತು" ಎಂದು ಉದ್ಗಾರ ತೆಗೆದನು. ಊರಕಡೆಯ ಕ್ಷೇಮಸಮಾಚಾರಗಳೆಲ್ಲ ಕೇಳಿ ಆದಮೇಲೆ ರಾಮುಕೃಷ್ಣ ಸೋಮಪ್ಪನನ್ನು ಊಟಕ್ಕೆಂದು ಕರೆದುಕೊಂಡು ಹೊರಬಿದ್ದನು.

ದಾರಿಯಲ್ಲಿ ಸೋಮಪ್ಪನು ತನ್ನ ಗೋಳನ್ನು ಹೇಳಿಕೊಂಡು ತಾನು ಬೆಂಗಳೂರಿಗೆ ಬಂದ ಉದ್ದಿಶ್ಯವನ್ನು ವಿವರಿಸಿದನು. ಅವನು ಹೇಳುವ ಕತೆಯನ್ನೆಲ್ಲಾ ರಾಮುಕೃಷ್ಣನು ಮೌನವಾಗಿ ಕೇಳಿದನೇ ಹೊರತು ಮಧ್ಯೆ ಒಂದೂ ಮಾತನಾಡಲಿಲ್ಲ. ಕೊನೆಗೆ . . . .

"ಸೋಮು, ನೋಡು ನೀನು ಅಂದುಕೊಂಡಂತೆ ಎಲ್ಲವೂ ನಡೆಯುವುದೆಂದು ನನಗನಿಸುವುದಿಲ್ಲ. ಮೊದಲು ನೀನು ಉಳಿದು ಕೊಳ್ಳಲು ಸ್ಥಳ ನೋಡಿಕೊಳ್ಳಬೇಕು. ನೀನು ಕಂಡಂತೆ ನಮ್ಮ ರೂಮಿನಲ್ಲಿ ಏಳೆಂಟು ಜನರಿದ್ದೇವೆ. ನಿನಗೆ ಅಲ್ಲಿ ಜಾಗ ಕೊಡಲು ನಾನು ಒಪ್ಪಿದರೂ, ಉಳಿದವರು ಒಪ್ಪಲಾರರು. ನಿನಗೆ ನಾಳೇನೆ ಕೆಲಸ ಸಿಗುತ್ತದೆಂದು ಹೇಳಲಾಗುವುದಿಲ್ಲ. ವಾರಗಳಾದರೂ ಆಗಬಹುದು, ತಿಂಗಳಾದರೂ ಆಗಬಹುದು. ಹೋಟಲಿನ ಮಾಲೀಕರ ಸಹವಾಸ

ಕಷ್ಟ. ನಿನ್ನನ್ನು ಆಗ ಬಾ, ಈಗ ಬಾ ಎಂತ ತಿರುಗಿಸಿ, ನೀನು ಆವರು ಎಂದುಕೊಂಡಷ್ಟು ಕಡಿಮೆ ಸಂಬಳಕ್ಕೆ ಸೇರಲು ಒಪ್ಪಿದರೆ ಕೆಲಸಕ್ಕೆ ಗೊತ್ತುಮಾಡುವರು. ಕೆಲಸಕ್ಕೆ ಸೇರಿದ ಮೇಲೋ ನಿನಗೆ ಕಷ್ಟ ತಪ್ಪಿದ್ದಲ್ಲ" ಎಂದು ಒಂದು ಪುಟ್ಟ ಭಾಷಣ ಮಾಡಿದನು. ಆ ರಾತ್ರಿ ಸೋಮುಗೆ ಉಸಿರುಕಟ್ಟಿಕೊಂಡಂತಾಗಿ ನಿದ್ದೆಯೇ ಬರಲಿಲ್ಲ.

೦ ೦ ೦ ೦ ೦

ಮೂರು ವಾರಗಳು ಕಳೆಯಿತು. ಸೋಮಪ್ಪನ ಹೃದಯದಲ್ಲಿ ನಿರಾಶೆಯು ಬೇರೂರಿತು. ಹೋಟಲೊಂದರಲ್ಲಿ ಕೆಲಸಕ್ಕೆ ಸೇರಿ ಎರಡು ಮೂರು ದಿನಗಳಾಗಿದ್ದುವು. ಅಷ್ಟರಲ್ಲೇ ತಾನು ಮಾಡಬೇಕಾದ ಕೆಲಸ ಸುಲಭವಾದುದಲ್ಲವೆಂದು ಅವನು ಮನಗೊಂಡಿದ್ದನು. ಎರಡು ದಿನಗಳಲ್ಲೇ ಎರಡು ಸಾಸರು, ಮೂರು ಗ್ಲಾಸುಗಳು ಅವನ ಕೈಯ್ಯಲ್ಲಿ ಪುಡಿಪುಡಿಯಾಗಿದ್ದುವು. ಅದರ ಬೆಲೆಯು ಒಂದೂವರೆಯಷ್ಟು ಅವನ ಲೆಖ್ಖದಲ್ಲಿ ಖರ್ಚು ಬಿದ್ದಿತ್ತು! ಆ ಹೋಟಲಿನವರು ಕೆಲಸಗಾರರಿಗಿಕ್ಕುವ ಊಟವೋ! ಈ ಊಟದಿಂದ ತನ್ನ ದುಡಿಮೆಯ ಮುಕ್ಕಾಲು ಹಣ ಡಾಕ್ಟರರಿಗೇ ಸಲ್ಲುವುದೆಂದು ಸೋಮಪ್ಪನು ಲೆಖ್ಖ ಹಾಕಿದ್ದನು.

ಹೋಟಲಿನ ಆ ಕೆಲಸ, ಊಟ, ರಾತ್ರಿಯಾದರೆ ತಾನುಹೋಗಿ ಮಲಗುವ ರೂಮು, ಅದರಲ್ಲಿ ದೊರೆಯುವ ವಿಶ್ರಾಂತಿ ಇವುಗಳನ್ನು ನೋಡಿ ಸೋಮಪ್ಪನು ವಿಧಿಯು ಮಾಡಿಸಿದ್ದಾಗಲೆಂದು ತನ್ನನ್ನು ತಾನೇ ಮರೆತಿದ್ದನು!!

ದೊಡ್ಡ ಹಬ್ಬ (ದೀಪಾವಳಿ) ಕ್ಕೆ ಸಾಧ್ಯವಾದರೆ ಮನೆಯ ಕಡೆ ಬಂದು ಹೋಗೆಂದು ತಾಯಿ ಹೇಳಿ ಬರೆಯಿಸಿದ್ದ ಪತ್ರಕ್ಕೆ ಉತ್ತರವನ್ನೂ ಕೊಟ್ಟಿರಲಿಲ್ಲ.

ಹೇಗೂ ಮಾರ್ಗಶಿರದ ಹೊತ್ತಿಗೆ ತಾನು ದುಡಿಯಲು ತೊಡಗಿ ಮೂರು ತಿಂಗಳಾಗುತ್ತದೆ. ಆಗ ಯಜಮಾನರನ್ನು ಕಂಡು, ಲೆಖ್ಖಾ

ಚಾರಮಾಡಿ ಹಣ ಪಡೆದು ತಾಯಿಗೆ ಕಳುಹಿಸಿದರಾಯಿತು ಎಂದು ಕೊಂಡಿದ್ದನು. ಆದರೆ ವಸ್ತುತಃ ಸಂಬಳ ಲೆಖ್ಖಾಚಾರವಾದಾಗ ಇವನ ಕೈಗೆ ಬಂದ ಹಣವನ್ನು ಕಂಡು ತನ್ನ ಕುತ್ತಿಗೆಯನ್ನು ತಾನೇ ಹಿಚುಕಿಕೊಳ್ಳಲೀ ಅನ್ನುವಂತಾಯಿತು ಸೋಮಪ್ಪನಿಗೆ.

ಂ ಂ ಂ ಂ ಂ

ಹಿಂದಿನ ಎಷ್ಟೋ ರಾತ್ರಿಗಳಂತೆ, ಆ ರಾತ್ರಿಯೂ ಸೋಮಪ್ಪನಿಗೆ ನಿದ್ದೆಯಿಲ್ಲ. ತನ್ನ ತಾಯಿ ತನಗಾಗಿ ಎಷ್ಟು ಕಾದಿರಬಹುದೆಂದು ಯೋಚಿಸಿದನು. ಬಹುಶಃ ರಾಮಣ್ಣನು ತುಂಬಾ ಸಹಾಯ ಮಾಡಿರ ಬೇಕು. ಅಡಿಕೆ ಎಷ್ಟಾಯಿತೆಂದು ಬರೆದಿಲ್ಲ. ಅಥವ ಪತ್ರ ಬರೆವಾಗ ಶ್ಯಾನುಭೋಗರು ಆ ವಿಚಾರ ಬರೆಯಲು ಮರೆತರೋ? ಯಾಕೆಂದರೆ ಅದೂ ಸಹಜವೇ. ತಾಯಿಗೆ ಪತ್ರ ಬರೆಯಲು ಬಾರದು. ನೆರೆಹೊರೆ ಯವರಲ್ಲಿ ಶ್ಯಾನುಭೋಗರೊಬ್ಬರು ಮಾತ್ರ ಬರೆಹ ಬಲ್ಲವರು. ಅವರಲ್ಲಿಗೆ ಹೋಗಿ, ಅವರ ಸಮಯ ಕಾದು ತಾಯಿ ತನಗೆ ಪತ್ರ ಬರೆಸಬೇಕು. ಅವಳು ಏನು ಹೇಳಿದಳೋ, ಇವರು ಏನು ಬರೆದರೋ! ಕೈಗೆ ಬಂದ ಸಂಬಳವನ್ನು ಯೋಚಿಸಿದೊಡನೆ ಅವನಿಗೆ ಊರಕಡೆಯ ಯೋಚನೆಯೇ ಬೇಡವೆನಿಸಿತು. ಈ ಸಲ ತಾನು ಖಂಡಿತ ಕಷ್ಟದಿಂದ ಪಾರಾಗಲಾರೆನೆಂದುಕೊಂಡನು. ಅಡಿಕೆ ತೋಟ ಹೇಗೂ ಸಾಹುಕಾರರ ಕೈಗೆ ಸೇರುವುದೇ ಸರಿ. ಸೋಮಪ್ಪನು ನಿಡಿದಾದ ಉಸಿರೊಂದನ್ನು ಬಿಟ್ಟು ಬಲಮಗ್ಗುಲಾಗಿ ಮಲಗಿದನು.

ದಿನ ದಿನ ಕಳೆದಂತೆ ಸೋಮಪ್ಪನು ಸನ್ಯಾಸಿಯಾಗುತ್ತಿದ್ದನು. ಅವನಿಗೆ ಇರುವ ಒಂದೇ ಒಂದು ಆಸೆಯೂ ಕೈಗೂಡಲಿಲ್ಲ. ಸಾಗರದ ಸಾಹುಕಾರರು ದಾವಾ ಮಾಡಿದ್ದಾರೆಂದು ಪತ್ರ ಬಂದು ವಾರದ ಮೇಲಾಗಿತ್ತು. ಊರಿಗೆ ಬಾ ಎಂದು ತಾಯಿ ಒತ್ತಾಯ ಮಾಡಿ ಬರೆಸಿದ್ದಳು. ಇದ್ದ ಒಂದು ಪಿತ್ರಾರ್ಜಿತ ಆಸ್ತಿಯ ಚೂರನ್ನೂ ತಾನು ಉಳಿಸಿಕೊಳ್ಳಲಾರನಾದಮೇಲೆ, ತಾನು ಜೀವಿಸಿದ್ದು ಫಲವೇನೆಂದು

ತಿಳಿದಿದ್ದನು. ಈಗ ಊರಿಗೆ ಹೋಗಿ ಮಾಡುವುದಾದರೂ ಏನು? ಲಾಯರನ್ನಿಟ್ಟು ವಾದಿಸಲು ಬೇಕಾಗುವಷ್ಟು ಹಣವಿದೆಯೇ ಕೈಯ್ಯಲ್ಲಿ? ಅಷ್ಟಿದ್ದರೆ ಸಾವುಕಾರರು ದಾನವನ್ನೇ ಮಾಡಬೇಕಾಗಿರಲಿಲ್ಲ. ಅವರ ಬಡ್ಡಿ ಎಂದೋ ತೀರಿಸಬಹುದಿತ್ತು. ಊರಿನಿಂದ ಕಾಗದಗಳು ಏಕೆ ಬರುತ್ತವೋ ಎನ್ನಿಸಿತು ಅಂದು ಅವನಿಗೆ.

ಂ ಂ ಂ ಂ ಂ

ಮಾಘ ಬಹುಳ ಅಮಾವಾಸ್ಯೆಗೆ ಇನ್ನು ಒಂದುವಾರ ಉಳಿದಿತ್ತು. ಸಂಜೆ ಆರು ಘಂಟೆಯ ಹೊತ್ತಿಗೆ, ಇವನು ಹೋಟಲಲ್ಲಿ ಯಾರಿಗೋ "ಸಪ್ಲೆ" ಮಾಡುತ್ತಿರುವಾಗ ಮೇನೇಜರಿಂದ ಕರೆ ಬಂತು.

ಇತ್ತೀಚೆಗೆ ತಾನು ಹೊತ್ತಿಗೆ ಸರಿಯಾಗಿ ಬಂದು ಕೆಲಸ ಮಾಡುತ್ತಿದ್ದನು. "ಕಪ್ಪು ಸಾಸರು" ಗಳನ್ನು ಒಡೆದಿರಲಿಲ್ಲ. ಈಗ ಮೇನೇಜರರಿಂದ ಕರೆ ಏಕೆ ಎಂದುಕೊಂಡು ಯೋಚಿಸುತ್ತಾ ಬಂದನು. ಮೇನೇಜರರು ಕೈಲೊಂದು ಕಾಗದವನ್ನು ಹಿಡಿದುಕೊಂಡು ಮೇಜಿನಮೇಲೆ ಕಾಲುಹಾಕಿ ಕುಳಿತಿದ್ದರು.

"ಸೋಮಯ್ಯಾ, ಇದೋ ನಿನ್ನ ಸಂಬಳದ ಬಾಬ್ತು ಹತ್ತು ರೂಪಾಯಿ. ಊರಲ್ಲಿ ನಿನ್ನ ತಾಯಿ ರೇಷ್ಮೆ ಕಾಹಿಲೆ (ನ್ಯೂಮೋನಿಯ) ಯಿಂದ ತೀರಿಹೋದರಂತೆ" ಎಂದು ಹೇಳಿ ಸಿಗರೇಟೊಂದನ್ನು ತೆಗೆದು ಹಚ್ಚಿದರು.

ಸೋಮಪ್ಪನಿಗೆ ಒಂದುಕ್ಷಣ ಏನುಮಾಡಬೇಕೆಂದೂ ತೋರಲಿಲ್ಲ. ಮೇನೇಜರರ ಮುಖವನ್ನು ದಿಟ್ಟಿಸಿ ನೋಡುತ್ತಿದ್ದನು. ಅವನ ಕಣ್ಣು ಮುಂದೆ ತಂದೆ, ತಾಯಿ, ತೋಟ, ಸಾಹುಕಾರರು, ಹೋಟಲು, ರೈಲು ಮೊದಲಾದ ಎಷ್ಟೋ ಚಿತ್ರಗಳು ಸುಳಿದುಹೋದವು.

ನಿಧಾನವಾಗಿ ಮೇನೇಜರರ ರೂಮನ್ನು ಬಿಟ್ಟು ಹೊರಬಿದ್ದನು. ರಸ್ತೆಯ ಮೇಲೆ ಜನಗಳ, ಗಾಡಿಗಳ, ಮೋಟಾರುಗಳ ಕಡೆ ಲಕ್ಷ್ಯವೇ ಇರಲಿಲ್ಲ. ಕಾಲುಗಳು ನಡೆಯುತ್ತಿದ್ದುವು. ಕಣ್ಣುಗಳು ಏನನ್ನು

ನೋಡುತ್ತಿದ್ದನೋ. ಅವನಿಗೆ ತಿಳಿವು ಬಂದಾಗ, ತುಳಸಿ ತೋಟದ ಕಲ್ಲುಬೆಂಚಿನ ಮೇಲೆ ಕುಳಿತಿದ್ದನು. ಈಗ ಅವನಿಗೆ ದುಃಖವೆನಿಸಲಿಲ್ಲ. ಹಿಂದೆ ಎಷ್ಟೋ ಬಾರಿ ಈ ಪ್ರಪಂಚದ ವಿಷಯವಾಗಿ ಖೇದಗೊಂಡಿದ್ದ. ಆದರೆ ಇಂದು ಅವನ ಮನಸ್ಸು ಯಾವ ವಿಚಾರವಾಗಿಯೂ ಬೇಜಾರು ಪಡಲಿಲ್ಲ. ಖೇದಗೊಳ್ಳಲಿಲ್ಲ. ನಿದ್ದೆಯಿಂದ ಆಗತಾನೆ ಎಚ್ಚೆತ್ತಾಗಿನ ಸುಖ-ಶಾಂತಿಗಳ ಅನುಭವವಾಗಿತ್ತು ಅವನಿಗೆ.

• • • • •

*

# ಸಮಸ್ಯೆ

"ಜಿನ್ನೀ . . . . ಜಿನ್ನೀ . . . ."

" . . . . . . ."

"ಯಾಕೋ ಜಿನ್ನೀ ಕರೆದರೆ ಮಾತಾಡೊಲ್ಲಾ?"

" . . . . . . ."

"ನಮ್ಮನೆ ಬೇಜಾರಾಯ್ತೇನೋ ಜಿನ್ನೀ?"

" . . . . . . ."

"ಮನೇಗೆ ಹೋಗ್ತೀಯೇನೋ?"

" . . . . . . ."

"ಒಬ್ಬಳನ್ನೇ ಬಿಟ್ಟು ಹೋಗಬೇಡ್ವೋ. ಅಪ್ಪ ಸಂತೆಯಿಂದ ಬರೋವರೆಗೆ ಕೊಂಚ ಇರೊ. ಬೇಜಾರಾದ್ರೆ ಕೊಳಲು ಊದುತ್ತೇನೆ."

ಮೌನವಾಗಿಯೇ ತಲೆಯಾಡಿಸಿದನು ಜಿನ್ನೀ. ಅವಳು ಕೊಳಲ ನೂದತೊಡಗಿದಳು. ಆ ನೀರವತೆಯಲ್ಲಿ ಮೃದುಮಧುರವಾದ ಆ ಕೊಳಲಗಾನಕ್ಕೆ ಮನೆಯೇ ಮನಸೋತಿತು! . . . .

ಗಾನವು ನಿಂತಿತು. ನಾಲ್ಕು ಕಣ್ಣುಗಳೂ ಒಂದಾದುವು. ಎರಡು ಹೃದಯಗಳಲ್ಲೂ ಯಾವುದೋ ಆಸೆ ಅಂಕುರವಾದಂತೆ ತೋರುತ್ತಿತ್ತು.

೨

"ರಂಗೂ!"

ಅವನು ಕರೆದ ಆ ಎರಡೇ ಅಕ್ಷರಗಳ ಹೆಸರಿನಲ್ಲಿ, ಆ ಉಚ್ಚಾರದ ಶಬ್ದದಲ್ಲಿ ಅವಳಿಗೆ ನಾದಾನಂದವು ಧಾರೆಯಾಗಿ ಸುರಿದಂತೆ ಕಂಡಿತು. ಕೊಳಲನ್ನು ಬದಿಗಿಟ್ಟು ಅವನ ಹತ್ತಿರಕ್ಕೆ ಸರಿದಳು ರಂಗಿ.

"ಏನೋ ಜಿನ್ನಿ?"

ಎವೆಯಿಕ್ಕದೆ ಅವಳ ಮುಖವನ್ನೇ ಅವನು ನೋಡುತ್ತಿದ್ದನು.

"ಯಾಕೋ ಕರೆದದ್ದು?"

"ರಂಗೂ, ನಾನೊಂದು ಮಾತ್ಕೇಳ್ತೀನೆ . . . ."

"ಹುಂ"

"ನಡೆಸಿ ಕೊಡ್ತೀಯಾ?"

ಕಬ್ಬಿಣದ ತುಂಡಿನಂತಿದ್ದ ಅವನ ತೋಳುಗಳ ಮೇಲೆ ಒಂದು ಬಾರಿ ಆಕೆ ಕೈಯಾಡಿಸಿದಳು. ಉತ್ತರವೀಯದೆ ಅವನ ಮುಖವನ್ನೇ ನೋಡುತ್ತಿದ್ದಳು. ಕಣ್ಣುಗಳಲ್ಲಿ ಆಸೆಯೊಂದರಅಂಕುರ ಮಿನುಗುತಿತ್ತು.

"ಬೇಡವೆ? ಹೋಗ್ಲಿ ಬಿಡು. ಕೇಳೊಲ್ಲ."

"ಹೇಳೋ ಜಿನ್ನೀ"

"ರಂಗೂ, ನಾನು ಮನೇಲಿ ಒಬ್ಬಳೇ ಇರಬೇಕಾಗುತ್ತೆ."

"ಹುಂ"

"ಮನೇಲಿ ಮಾತ್ನಾಡೋರ್ಕೂಡ ಯಾರೂ ಇಲ್ಲ"

"ಹುಂ"

"ಯಾವಾಗ್ಲೂ ಬಣಬಣಾಂತ ಇರುತ್ತೆ."

"ಹುಂ"

"ನನ್ನಷ್ಟಕ್ಕೆ ನಾನೇ ಮಾತ್ನಾಡಿಕೊಳ್ಳಿಕ್ಕೆ ಬರೊಲ್ಲ."

". . . . . ."

". . . . ಬೇಜಾರಾಗುತ್ತೆ . . . ."

"ಹುಂ"

"ಬಿಕೋ ಅಂತ . . . . ಸುಮ್ನೆ ಕುಳ್ತಿರ್ಲಿಕ್ಕಾಗುತ್ತಾ?"

". . . . . ."

"ಬೇಜಾರು ಕಳೀಲಿಕ್ಕೆ . . . ."

"ಹುಂ"

"ರಂಗೂ, ನಿಮ್ಮಪ್ಪ ನನ್ನ ಬಯ್ಕೊಳ್ಳಿ ತಾನೆ ನಾನ್ಕೇಳಿದ್ದಕ್ಕೆ"

"ಯಾಕೆ ಬಯ್ತಾನೆ?"

"ಅಲ್ಲ ರಂಗೂ. ತನಗೆ ಉಂಕಪ್ಪನಾಗುತ್ತೇಂತ"

"ಉಂದ್ರೆ?"

"ನಾನ್ಕೇಳಿದ್ನ ಕೊಟ್ಟಿದ್ರೆ ನಾನು . . . ರಂಗೂ . . . . ಎಷ್ಟು ಸುಖವಾಗಿ . . . . ಆನಂದದಿಂದ ಕಾಲ ಕಳೀತಿದ್ದೆ."

ಅವಳ ಹೃದಯವು ದಡದಡನೆ ಬಡಿಯತೊಡಗಿತು. ಅದರ ಶಬ್ದವು ಅವಳ ಕಿವಿಗೇ ಕೇಳುತ್ತಿತ್ತು. ತನ್ನ ಬಯಕೆ ಕೈಗೂಡಿತೆಂಬ ಆಸೆಯಿಂದ ಮನವು ಉಲ್ಲಸಿತವಾಯಿತು. ಅವನ ಮೊಗವನ್ನು ನಿರೀಕ್ಷಿಸಿದಳು.

೨

"ಜಿನ್ನೀ, ಜಿನ್ನೀ, ನಾನೇ ಹೇಳ್ತೀನಿ ಅಪ್ಪನಿಗೆ"

". . . .  . . . ."

"ಏನು ಬೇಕು? ಹೇಳೊ."

"ನಿಮ್ಮಪ್ಪ ಒಪ್ಪಿದ್ರೂ ನೀನು . . . ."

"ಹುಂ. ನಾನೂ, ನಾನೂ ಒಪ್ತೇನೆ ಜಿನ್ನೀ"

". . . .  . . . ."

"ನಿಶ್ಚಯವಾಗೂ ಒಪ್ತೇನೆ ಜಿನ್ನೀ."

ಆಶಾಪೂರಿತ ದೃಷ್ಟಿಯಿಂದ ಅವನ ಮೊಗವನ್ನು ನೋಡತೊಡಗಿದಳು. ಅವನೂ ಅವಳನ್ನು ನೋಡಿದನು. ಇದುವರೆಗೆ ಅವಳು ಅರಿಯದ ಲಜ್ಜೆ ಈಗ ಬಂದಿತು. ಮೊಗವನ್ನು ತಗ್ಗಿಸಿದಳು.

"ಕೇಳಲಾ ರಂಗೂ?"

"ಹುಂ. ಕೇಳೊ."

". . . . . ."

"ಕೇಳೋ"

"ರಂಗೂ, ಒಬ್ಬನೇ ಇರಲಿಕ್ಕೆ ಬೇಜಾರಾಗುತ್ತೆ. ಆ ನಿನ್ನ ಕೊಳಲ್ನ ನಂಗೆ ಕೊಡ್ತೀಯಾ? ಅದನ್ನು ಊದುತ್ತಾ ಬೇಜಾರು ಕಳ್ಕೋತಿದ್ದೆ."

ಅಷ್ಟು ಹೊತ್ತೂ ಅವನ ಹತ್ತಿರವೇ, ಅವನ ಮೈಗೆ ತಾಗಿಕೊಂಡು ಅವನ ಮೊಗವನ್ನೇ ನಿರೀಕ್ಷೆಯಿಂದ ನೋಡುತ್ತಿದ್ದ ರಂಗಿ ಅವನು ಕೊಳಲು ಕೇಳಿದೊಡನೆಯೇ ತಟ್ಟನೆ ಎದ್ದು ಗಂಟು ಮೋರೆ ಹಾಕಿಕೊಂಡು ಒಳಕ್ಕೆ ಹೋದಳು!

ಅದೇಕೆ ಎಂಬುದು ಜಿನ್ನಿಗೆ ಇಂದಿಗೂ ಒಂದು ಸಮಸ್ಯೆಯಾಗಿದೆ!

. . . . . .

# ಮಹತ್ಸಾಧನೆ

“ಎಲ್ಲಿವರೆಗೆ ಅಂತ ಅನುಭವಿಸುವುದಪ್ಪ, ಸಾಕು. ಇನ್ನೇನು ತಡೆಯುವಂತಿಲ್ಲ. ಮರಣವೇ ಗತಿ.” ಹೀಗೆಂದು ಮಹದೇವಯ್ಯನು ಯೋಚಿಸಿದನು. ಹಾಗೇ ಒಂದು ಸಲ ಹಿಂದಕ್ಕೆ ಒರಗಿ ತನ್ನ ಆಫೀಸನ್ನೂ ಮತ್ತು ಎದುರಿಗೆ ಕಾಣುವ ಸೌತ್‌ಪೆರೇಡ್ ಮೈದಾನವನ್ನೂ ನೋಡಿದನು. ಏನೋ ತಲೆ ತುಂಬ ಆಲೋಚನೆ ತುಂಬಿದೆ.

ಮಹದೇವಯ್ಯನು “ಯೂ ಡೈ ವಿ ಗಿವ್ ಮನಿ ಇನ್ಶೂರೆನ್ಸ್ ಕಂಪೆನಿ” ಬೆಂಗಳೂರು ಶಾಖೆಯ ವ್ಯವಸ್ಥಾಪಕ. ಕೈ ತುಂಬ ಸಂಬಳ, ಹೆಜ್ಜೆ ಹೆಜ್ಜೆಗೆ ಆಳು, ಸೌತ್‌ಪೆರೇಡ್ ರೋಡಿನಲ್ಲಿ ಆಫೀಸು. “ಸುಖ ಪುರುಷನಯ್ಯ ನೀನು” ಅಂತ ದಿನಕ್ಕೆ ಸಾವಿರುಸಲ ಅವನ ಸ್ನೇಹಿತರು ಹೇಳುತ್ತಿದ್ದರೂ ಮಹದೇವಯ್ಯನ ಕಷ್ಟ ಅವನಿಗೇ ಗೊತ್ತು. ಈ ಹೊತ್ತು ಹನ್ನೆರಡು ಗಂಟೆಗೆ ಆಫೀಸಿಗೆ ಬಂದು ಕುಳಿತುಕೊಂಡು ಮರಣವೇ ಶರಣೆಂದು ಯೋಚಿಸುತ್ತಿದ್ದಾನೆ. ಅದೇನು ವಿವೇಚನೆ ಇಲ್ಲದೆ ಬಂದ ನಿರ್ಧಾರವಲ್ಲ. ಅವನಿಗೆ ಸಾಯುವುದೇ ಸುಖವೆಂಬ ಯೋಚನೆ ಬಂದಲಾಗಾಯ್ತು ಈಕ್ಷಣದವರೆಗೆ ತಿರುಗಿ ತಿರುಗಿ ಯೋಚಿಸಿ ಚರ್ಚಿಸಿ ಈ ನಿರ್ಧಾರಕ್ಕೆ ಬಂದಿದ್ದಾನೆ. ದಾಸರು ಹೇಳಿದಂತೆ “ಈಸಬೇಕು ಇದ್ದು ಜೈಸಬೇಕು” ಎಂಬುದನ್ನ ಅನುಸರಿಸಬೇಕೆ ಅಥವಾ . . . . ಹುಂ ಈಸಲಿಕ್ಕೆ ಸ್ಥಳ, ಶಕ್ತಿ ಇದ್ದರಲ್ಲವೇ ಜೈಸುವ ಹಂಬಲ. ಅವೆಲ್ಲ ಸಾಧ್ಯವೇ ಇಲ್ಲ. ಅಂದಮೇಲೆ ಮರಣವೇ ಗತಿ. ಹೀಗೆ ಬಂದಿದೆ ಅವನ ನಿರ್ಧಾರ. ಕಾರಣ? ಕಾ . . ರ . . ಣ! ಅಯ್ಯೋ ಅದು ಬೇರೆಯವರಿಗೆ ಹೇಗೆ ತಿಳಿದೀತು? ಬೇರೆಯವರು ಯಾರು ಅವನಂತೆ ಅದರಿಂದ ಕಷ್ಟಪಡುತ್ತಿದ್ದಾರೆ? ಅದರ ತೀಕ್ಷ್ಣತೆ ಬೇರೆಯವರಿಗೆ ತಿಳಿಯುವುದು ಹೇಗೆ? ಬರೀ ಹೇಳುವುದರಿಂದ ಅದು

ಅರಿವಾಗಲಾರದು. ಅವನಿಗೆ ಬರುವ ಅಜೀರ್ಣದ ಹೊಟ್ಟೆಸೋವು . . . . ಅಬ್ಬಬ್ಬ . . . . ಇಡೀ ಮೆಡಿಕಲ್ ಕೌನ್ಸಿಲ್ಲಿಗೇ ಹೇಳಿದರೂ ತೀರದು!

ಅವನಿಗಾದರೂ ಸಾಕಾಗಿ ಹೋಗಿತ್ತು. ಎಷ್ಟು ಅಂತ ಔಷಧಿ ಮಾಡಿಯಾನು? ಅದಕ್ಕೊಂದು ಗಡಿ ಮಿತಿ ಇಲ್ಲವೆ! ಮುತ್ತಜ್ಜಿ ಹೇಳಿದ್ದಳೆಂದು ಮೆಣಸಿನ ಕಾಳಿನ ಕಷಾಯದಲ್ಲಿ ಈಜಾಡಿದ್ದನು. ಎಲ್ಲಾ "ಪತಿ" ಡಾಕ್ಟರನ್ನೂ ವಿಚಾರಿಸಿದ್ದನು. ಎಲ್ಲಾ ಜಾಹೀರಾತನ್ನೂ ಓದಿ ಔಷಧಿ ತರಿಸಿ ಉಪಯೋಗಿಸಿದ್ದನು. "ನಿಮ್ಮ ಹೊಟ್ಟೆಯಲ್ಲಿ ಜನಿಸುವ ಹೈಡ್ರೋಕ್ಲೋರಿಕ್ ಆಸಿಡ್ಡು ಆರಂಗುಲದ ಚಾಪೆಯನ್ನು ಸುಟ್ಟುಹಾಕುತ್ತದೆ. ನಿಮ್ಮ ಹೊಟ್ಟೆಯ ಗತಿ ಏನು. ಪ್ರೀಮಿಯರ್ಸ್ ಪೆರ್ಯಿ ಪ್ರಿವೆಂಟರನ್ನು ಉಪಯೋಗಿಸಿರಿ" ಎಂಬುದನ್ನು ಓದಿ ನಾಲ್ಕು ಗ್ಯಾಲನ್ ಹೈಡ್ರೋಕ್ಲೋರಿಕ್ ಆಸಿಡ್ಡನ್ನ ನ್ಯೂಟ್ರಲೈಸ್ ಮಾಡುವಷ್ಟು ಮಾತ್ರೆಗಳನ್ನು ತರಿಸಿ ತಿಂದನು. ಅಂತರಂಗದ ಶುದ್ಧಿಯಾಗಲೆಂದು ಆಂಡ್ರೂಸರ ಆಲ್ಕಲೈನ್ ಪುಡಿಯನ್ನು ಪಂಚಕಜ್ಜಾಯದಂತೆ ಪೂರೈಸಿದನು. ಕಲ್ಲನ್ನು ತಿಂದರೂ ಕರಗಿಸುವಂತಹುದಾದ ಕಷ್ಟನ್‌ರವರ ಕ್ರೌನ್ ಎಲೆಕ್ಸಿರನ ಸಮುದ್ರವನ್ನೆ ಕುಡಿದು ಅಭಿನವ ಅಗಸ್ತ್ಯನೆನಿಸಿದನು. ಆಯುರ್ವೇದದ ಅಗ್ನಿರಸ-ಅಗ್ನಿತುಂಡಿಗಳನ್ನು ಮುಕ್ಕಿದನು. ಊಹುಂ! ಏನೂ ಪ್ರಯೋಜನವಾಗಲಿಲ್ಲ ಅಂದಮೇಲೆ ಇನ್ನೆಲ್ಲಿಯವರೆಗೆ ನೋಡುವುದು.

ಆಫೀಸು ಗಡಿಯಾರವು ಮೂರು ಗಂಟೆ ಹೊಡೆಯಿತು. ಮರಣದ ನಿರ್ಧಾರದಿಂದ ಚಲಿತನಾಗಿರಲಿಲ್ಲ ಮಹದೇವಯ್ಯ! ಸಾಯುವುದಂತೂ ಸರಿ. ಮುಂದೇನು? ಮುಂದೇನು? ಇದೊಂದು ದೊಡ್ಡ ತೊಡರಿನ ಪ್ರಶ್ನೆ. ಅಂದರೆ ಮೊದಲನೆಯದಾಗಿ ತನ್ನ ಆಸ್ತಿ ಜವಾಬ್ದಾರಿಯ ಗತಿಯೇನು. ಎರಡನೆಯದಾಗಿ ಸಾಯುವ ರೀತಿ ಹೇಗೆ? ಛೆ! ಇದೂ ಒಂದು ತರಹೆಯ ಕಷ್ಟವೇ. ಹೆಂಡತಿ

ಮಕ್ಕಳಂತೂ ಇಲ್ಲ. ಅದೊಂದು ನಿರಾಲೋಚನೆ. ಇನ್ನು ಬ್ಯಾಂಕ್ ನಲ್ಲಿರುವ ಆರು ಸಾವಿರ ರೂಪಾಯಿಗಳು. ಇವುಗಳ ಬಗ್ಗೆ ಏನು ಮಾಡಬೇಕು. ಮರಣ ಶಾಸನವನ್ನು ಬರೆಸಲು ಲಾಯರರ ಹತ್ತಿರ ಹೋದರೆ ತನ್ನ ನಿರ್ಧಾರಕ್ಕೆ ತೊಂದರೆಯಾಗುವುದು. ಸ್ವಲ್ಪ ಹೊತ್ತು ಯೋಚಿಸಿ ಮೇಜಿನ ಡ್ರಾ ಎಳೆದು ಚೆಕ್ ಪುಸ್ತಕವನ್ನು ತೆಗೆದನು. (೧) ತನ್ನ ಅಕ್ಕನ ಮಗ. ಆವನಿಗೆ ಸ್ವಲ್ಪ ಜಂಭ ಜಾಸ್ತಿ, ಷೋಕಿ ಹುಚ್ಚು. ಕೊಟ್ಟ ಹಣವನ್ನೆಲ್ಲಾ ಕ್ರೀಂ ಹೇರಾಯಲ್‌ಗೆ ಉಪಯೋಗಿಸಿದರೆ. ಅಯ್ಯೋ! ಏನಾದರೂ ಸಾಯಲಿ. ನೋಡಿ ಸಂಕಟ ಪಡಲಿಕ್ಕೆ ತಾನಿದ್ದರಲ್ಲವೆ! ಅವನಿಗೆಂದು ಒಂದು ಚೆಕ್‌ನ್ನ ಬರೆದನು. (೨) ರಾಮಾಶಾಸ್ತ್ರಿ, ಪಾಪ ತನಗೆ ಬಿಸಿನೆಸ್ ಮಾಡಲು ತುಂಬ ಸಹಾಯ ಮಾಡಿದ್ದಾನೆ. ಏನೋ ದುಡ್ಡಿನಾಸೆ ಬಡವ. ಇರಲಿ. ಅವನಿಗೊಂದು ಚೆಕ್ ಬರೆದುದಾಯಿತು. ಹೀಗೆ ಎಂಟು ವಿಭಾಗ ಮಾಡಿ ಅವರವರಿಗೆ ತನ್ನ ಕೊನೆಯ ಕಾಗದವನ್ನು ಬರೆದು ಮುಗಿಸಿದ. ಕೊನೆಯದಾಗಿ ಉಳಿದ ಚೆಕ್‌ಗಳನ್ನು ಹರಿದು ಒಂದು ಲಕೋಟೆ ತುಂಬಿ ತನ್ನ ಲೆಕ್ಕವನ್ನು ಮುಚ್ಚುವಂತೆ ಬ್ಯಾಂಕಿಗೆ ಬರೆದನು. ಇದಿಷ್ಟಂತು ಆಯಿತು. ಇನ್ನು ಎರಡನೇ ವಿಷಯ, ಸಾಯುವ ಬಗೆ. ರಿವಾಲ್ವಾರೇ, ಹಗ್ಗವೇ, ವಿಷವೇ, ಕೆಂಪಾಂಬುಧಿ ಕೆರೆಯೇ? ಒಂದೊಂದರ ಆಗುಹೋಗುಗಳನ್ನ ಚರ್ಚಿಸಿ ಕೊನೆಗೆ ವಿಷವೇ ಸರಿ ಎಂಬ ನಿರ್ಧಾರಕ್ಕೆ ಬಂದನು. ಬಾಗಿಲ ಕಡೆ ನೋಡಿ ಬೋರಾ ಎಂದು ಕೂಗಿದನು. ಬೋರನು ಸಾವಿಸಾ ಎಂದು ಒಳಕ್ಕೆ ಬಂದನು.

"ಬೋರಾ, ಟೈಪಿಷ್ಟಳು ಬಂದಿದ್ದಾಳೇನೋ?"

"ಹೂಂ ಬಂದಿದಾರೆ ಸ್ವಾಮಿ ಈಗ"

"ಹಾಗಾದರೆ ಕರೆ ಅವಳನ್ನು"

"ಸರ್"

"ಕಮಿ೯"

ಒಳಕ್ಕೆ ಬಂದವಳು ಮಿಸ್ ಟೇಕ್ಸಿಟ್ ಹಾರ್ಡ್. ಅವನ ಸ್ಟೆನೋಟೈಪಿಸ್ಟ್. ಮಿಸ್ ಹಾರ್ಡಳು ನೋಡಲಿಕ್ಕೆ ನೀಟಾಗಿದ್ದಾಳೆ. ವಯಸ್ಸು ೨೮ ಆದರೂ, ತನ್ನ ರೂಪ, ನಡತೆ, ನೀತಿ ಈ ವಿಷಯದಲ್ಲಿ ಅವಳಿಗೆ ಬೆಲೆ ಬಹಳ. ತಾನು ಪೇಟೆಯಲ್ಲಿ ಹೊರಟರೆ ಎಲ್ಲರೂ ತನ್ನನ್ನೆ ನೋಡುವರೆಂದು ಅವಳ ಎಣಿಕೆ. ಯಾರಾದರೂ ಮಾತನಾಡಿಸ ಹೋದರೆ ನಿನ್ನಂತಹ ರೂಪವತಿಯನ್ನು ನೋಡಿಲ್ಲ, ನನ್ನನ್ನು ಮದುವೆ ಯಾಗುವೆಯಾ ಅಂತ ಕೇಳುತ್ತಾರೆಂದು ಅವಳ ಗಣನೆ. ಎಲ್ಲರ ಮೇಲೂ ಇಲ್ಲದ ಅನುಮಾನ. ಮಹದೇವಯ್ಯನು ಕರೆದನು.

"ಮಿಸ್ ಹಾರ್ಡ್"

"ಸರ್"

"ಈ ದಿನ ತುಂಬ ಕೆಲಸವಾಗಿರಬೇಕು"

"ಹೌದು ಸರ್"

"ತುಂಬ ತೊಂದರೆಯಾಯ್ತೇನೋ ಇದೊಂದಿಷ್ಟು ಲೆಟರ್ ಪೋಸ್ಟ್ ಮಾಡುತ್ತೀರಾ"?

ಮಿಸ್ ಹಾರ್ಡಳ ಮುಖವು ಕೆಂಪಾಯಿತು, ಏನೋ ಒಂದು ಆಲೋಚನೆ ಬಂದು. ಮಹದೇವಯ್ಯನು ಸ್ಟಾಂಪಿಗೆಂದು ಡ್ರಾ ಎಳೆದನು. ಸ್ಟಾಂಪಿನ ಜೊತೆಗೆ ತನ್ನ ಉಪಯೋಗಕ್ಕೆಂದು ಇಟ್ಟು ಕೊಂಡಿದ್ದ ರೆಡಿಮನಿ ನೂರು ರೂಪಾಯಿಗಳು ಕಂಡವು. ಇದನ್ನೇನು ಮಾಡುವುದೆಂದು ಅವನ ಯೋಜನೆಗೆ ಬಂದಿರಲಿಲ್ಲ. ಥಟ್ಟನೆ ತಲೆಗೆ ಹೊಳೆಯಿತು ಆ ಹಣವನ್ನು ಅವಳಿಗೆ ಕೊಟ್ಟುಬಿಡಬೇಕೆಂದು.

"ಮಿಸ್ ಹಾರ್ಡ್" ಅವನು ಮೃದುವಾಗಿ ಕರೆದನು.

ಅವಳು ಮೌನವಾಗಿದ್ದಳು.

"ನೀವು ನನ್ನ ಆಫೀಸಿನಲ್ಲಿ ಕೆಲಸ ಮಾಡುತ್ತ ಆರು ವರ್ಷ ಗಳಾದುವು . . . ."

"ಹೌದು ಸಾರ್"

"ನಾನು ನಿಮಗೆ ಏನೊಂದು ಬಹುಮಾನವನ್ನ ಇದುವರೆಗೂ ಕೊಡಲಿಲ್ಲ" ಅವನು ಮುಗುಳು ನಗುತ್ತ ನೂರು ರೂಪಾಯಿಗಳನ್ನು ಅವಳೆದುರು ಮೇಜಿನ ಮೇಲಿಟ್ಟನು.

"ಸರ್"

"ನನಗೆ ತಿಳಿದಿದೆ ನೀನು ಸಂತೋಷ ಪಡುವೆ ಎಂದು. ಅಲ್ಲವೆ ಮಿಸ್ ಹಾರ್ಡ್"

ತಾನು ಕಾಯುತ್ತಿದ್ದ ಸಮಯವು ಬಂತೆಂದು ಅವಳಿಗೆನ್ನಿಸಿತು. ಮಹದೇವಯ್ಯನ ಮುಖದ ನೀರಿಳಿಸಬೇಕೆಂದು ತಯಾರಾದಳು.

"ಕ್ಷಮಿಸಿರಿ. ನಾಹು ಬೀದಿ ಹೆಂಗಸೆಂದು ತಿಳಿದಿರೇನು? ಇಷ್ಟು ದಿನ ನಾನು ಏನೋ ಅಂತಿದ್ದೆ. ಇವತ್ತು ನಿಮ್ಮ ಬಣ್ಣ ಬಿಚ್ಚಿದಿರೋ"

"ನೋ ನೋ ಮಿಸ್ ಹಾರ್ಡ್. ನೀವು ತಪ್ಪು ತಿಳಿದು ಕೊಂಡು . . . ." ಅವನ ಮಾತು ಮುಗಿಯಲಿಲ್ಲ.

"ನನಗೆ ಗೊತ್ತಿದೆ. ಆದರೆ ಇಷ್ಟು ಧೈರ್ಯವಾಗಿ ನೀವು ಹೀಗೆಲ್ಲ ಮಾಡುತ್ತೀರೆಂದು ತಿಳಿದಿರಲಿಲ್ಲ, ಸಂಬಳಕ್ಕಿರುವ ಸ್ಟೆನೋಟೈಪಿಸ್ಟಾಗಿರ ಬಹುದು. ಅಂದ ಮಾತ್ರಕ್ಕೆ . . . ."

"ನಿಜವಾಗಿಯೂ ನನಗೆ ಬೇರೆ ಯೋಚನೆ . . . ."

"ಅದೇ ಹೇಳಿದ್ದು. ಇಷ್ಟು ದಿವಸ ಕಾದಿರೇನೋ ಸಮಯ ಸಿಕ್ಕಲೆಂದು. ಅಯ್ಯೋ ನನಗೆ ಗೊತ್ತಿತ್ತು, ಎಪ್ಪೊ ಒನ್ ಕಲ್ಯಾಣ ಮಾಹಲೆಯೋ ಅಪ್ಪವೇ ಒನ್ ಯೋಗ್ಯತೆ ತೆರಿಂಜಿದು . . . ."

"ನನ್ನ ಮಾತನ್ನು ಪೂರ್ತಿ ಕೇಳಬಾರದೇ . . . ."

"ಕೇಳೋದೇನು ಮುಖ, ಕಣ್ಣು, ನಡತೆ ನೋಡಿ ನಾನು ತಿಳಿದುಕೊಳ್ಳಲಾರೆನೆ . . . ."

"ಎಲಾ ಹೆಂಗಸೇ" ಮಹದೇವಯ್ಯನು ಕುಸಿದುಬಿದ್ದನು.

"ನಿಮ್ಮಂತವರು ಸಂಬಳಕ್ಕಿರುವ ಸ್ಟೆನೋಟೈಪಿಸ್ಟರ ಮೇಲೆ ಈ ರೀತಿ . . . ."

"ಅಯ್ಯೋ ಅವಿವೇಕಿ" ಅಷ್ಟಕ್ಕೇ ಮಹದೇವಯ್ಯನ ಮಾತು ಕಟ್ಟಿತು.

"ನಾನಂದರೇ ಏನೆಂದು ತಿಳಿದಿದ್ದಾರೆಯೋ, ಸರ್ ಇನ್ನಿಕಿ ಪೋರುಂ ಒನ್ ಆಫೀಸು" ಮಿಸ್ ಟಿಕ್ನಿಟ್ ಹಾರ್ಡಗಳು ಬಾಗಿಲ ಹತ್ತಿರ ನಡೆದಳು. ಮಹದೇವಯ್ಯನ ಕೋಪ ಮಿತಿಮೀರಿತು. ಎದ್ದು ನಿಂತನು. ಹಾರ್ಡಗಳು ಒಂದೇ ಹಾರಿಕೆಗೆ ರಸ್ತೆಯಲ್ಲಿದ್ದಳು.

"ಅಯ್ಯೋ ಕೃತಘ್ನಳೇ" ಮಹದೇವಯ್ಯನು ಯೋಚಿಸಿದನು. ಪ್ರಪಂಚದಲ್ಲಿ ಎಲ್ಲರೂ ತನ್ನ ಭಾಗಕ್ಕೆ ಕೃತಘ್ನರಾದರೆಂದು ಅವನಿಗೆ ಕಂಡಿತು. ಅವನ ಸಾವಿನ ನಿರ್ಧಾರದ ತಳಹದಿಯು ಒಮ್ಮೆಗೇ ಆದರಿ ಉದುರಿತು. ಛೀ ತಾನು ಸಾಯಬೇಕು. ಸತ್ತು ಇಂತಹ ಕೃತಘ್ನರನ್ನು ಬೆಳಸಬೇಕು. ಕೇವಲ ಹುಚ್ಚುತನ ತನ್ನದು ಎನ್ನಿಸಿತು. ಆರುಸಾವಿರ ರೂಪಾಯಿಗಳನ್ನು ಎಂಟು ಚೆಕ್‌ಗಳಲ್ಲಿ ಬರೆದು ಇಟ್ಟಿದ್ದ ಕಾಗದಗಳ ಕಡೆ ಕೈ ಹಾಕಿದನು. ಅಲ್ಲೇಸಿವೆ! ಅವನ್ನು ಪೋಸ್ಟ್ ಮಾಡಲು ಹಾರ್ಡಗಳು ತೆಗೆದುಕೊಂಡು ಹೋದಳೆಂಬುದನ್ನು ಯೋಚಿಸಲು ಅವನಿಗೆ ಅರ್ಧ ನಿಮಿಷವಾಯಿತು.

"ಬೋರಾ" ಒಮ್ಮೆ ಆ ಕಾಗದಗಳು ಪೋಸ್ಟಿಗೆ ಬಿದ್ದವೆಂದರೆ ತೀರಿತು ನನ್ನ ಗತಿ ಎನ್ನಿಸಿತು.

"ಬೋರಾ"

"ಸಾಮಿ"

"ಹೊರಗಡೆ ಕಾರಿದೆಯೇನೋ"

"ಇಲ್ಲ ಸಾಮಿ, ಡಾಕ್ಟರನ್ನ ಕರೆಯಲು ಹೋಗಿದೆ"

ಸರಿ ಇದೂ ಒಂದು ಕಷ್ಟ. ಹೊರಗೆ ಬಂದು ರಸ್ತೆಯಲ್ಲಿ ನಿಂತು ನೋಡಿದನು. ಮಿಸ್ ಹಾರ್ಡಗಳು ಎಂಪೈರ್ ಟಾಕೀಸಿನ ಹತ್ತಿರ ಹೋಗುತ್ತಿದ್ದಾಳೆ. ಒಂದೇ ಉಸುರಿಗೆ ಓಡಿದನು "ಮಿಸ್ ಹಾರ್ಡ್

ಮಿಸ್ ಹಾರ್ಡ್" ಚೀರುತ್ತ ಕೂಗಿದನು. ನೂರಾರುಜತೆ ಕಣ್ಣುಗಳು ಇವನನ್ನೆ ದಿಟ್ಟಿಸಿದುವು. ಅವಳಿಗೆ ಹಿಂದಿನಿಂದ ಇವನು ಕೂಗುತ್ತ ಬರುವುದನ್ನು ನೋಡಿ ಗಾಬರಿಯಾಯಿತು, ಈ ಮನುಷ್ಯನಿಗೆ ಕಾಮ ಸನ್ನಿಯಾಗಿದೆ ಎಂದುಕೊಂಡಳು.

"ಮಿಸ್ ಹಾರ್ಡ್ ಒನ್ ಮಿನಿಟ್" ಹತ್ತಿರ ಹತ್ತಿರ ಬರುತ್ತಿದ್ದಾನೆ.

ರಸ್ತೆಯಲ್ಲಿ ತನ್ನ ಮಾನ ತೆಗೆಯುತ್ತಾನೆ ಎನ್ನಿಸಿತು ಅವಳಿಗೆ. ಒಂದೇ ಸಲ ಅವಳು ಕಾಲಿಗೆ ಸ್ಪೀಡ್ ಕೊಟ್ಟಳು.

"ಸ್ವಲ್ಪ ನಿಲ್ಲಿರಿ ಮಿಸ್ ಹಾರ್ಡ್" ಕೂಗಲಾರದೆ ಕೂಗಿದನು

ಅವಳು ಓಡುವುದನ್ನು ಕಂಡು ಸುತ್ತಾ ವೇಗವಾಗಿ ಓಡಿದನು. ಅಂತೂ ಅವಳ ಬೈಬಲ್ ಟ್ರಾಕ್ಟ್ ಹತ್ತಿರ ಬರುವಾಗ ಗಪ್ಪನೆ ಅವಳ ಕೈ ಹಿಡಿದನು. ಅವಳು ಹೋ ಎಂದು ಕೂಗಿದಳು. ಚೌಕದಲ್ಲಿ ಡ್ಯೂಟಿಯಲ್ಲಿದ್ದ ಪೋಲೀಸರವನು ಇತ್ತ ತಿರುಗಿ ನೋಡಿದನು.

"ಏನು ಸಾರ್ ಅದು" ಮಹದೇವಯ್ಯನು ಅವಳ ಕೈ ಬಿಟ್ಟ.

"ಅದೂ . . . . ಅದೂ . . . . ಆ ಲೆಟರ್ಸ್ . . . ."

ಪೋಲೀಸರವನು ಅವಳನ್ನು ನೋಡಿದನು, ಅವಳು ಎರಡೂ ಕೈಗಳಲ್ಲಿ ಎಂಟು ಲಕೋಟೆಗಳನ್ನ ಭದ್ರವಾಗಿ ಹಿಡಿದಿದ್ದಳು.

"ಏನು ಚೋರಿ ಏನ್ಸಾರ್ ?"

"ನೋ ಮಿಸ್ಟರ್ ಅವಳೇ ಪೋಸ್ಟಿರಿಂದ ಈ ಲೆಟರ್ಸ್ ಪೋಸ್ಟ್ ಪಣ್ಣಾರ್ತಕ" ಮಿಸ್ ಹಾರ್ಡಳು ತನ್ನ ಹೇಳಿಕೆಯನ್ನು ಹೇಳಿದಳು.

"ಹಾಗಿದ್ದರೆ ಈ ಗಲಾಟೆ ಏಕೆ. ಅವರ ಕಾಗದಗಳನ್ನು ಅವರಿಗೆ ಕೊಟ್ಟುಬಿಡಿ"

ಮಿಸ್ ಹಾರ್ಡಳು ಮುಖತಿರುವಿ ಐದಕ್ಷರದ ಒಂದು ಶಬ್ದವನ್ನು ಉಚ್ಚರಿಸಿ ಕಾಗದಗಳನ್ನು ಎಸೆದಳು.

ಐದುಗಂಟೆಯಾಗಿತ್ತು. ಎರಡು ಫರ್ಲಾಂಗ್ ಓಡಿ ದಣಿದು ಹೋಗಿದ್ದ ಮಹದೇವಯ್ಯನು ಸುಸ್ತಾಗಿ ಕುಳಿತಿದ್ದನು. ಏನೋ ಮಲಗಿದರೆ ಸಾಕೆನ್ನಿಸಿತು. ಮಾರನೆಯ ದಿನ ಬೆಳಿಗ್ಗೆ ಎದ್ದಾಗ ಮೈ ಕೈ ಎಲ್ಲ ನೋವು. ಆದರೂ ಉತ್ಸಾಹವಿತ್ತು. ಕಾಫಿ ಇಡ್ಲಿ ಸಾಂಬಾರು ಎಲ್ಲ ಆಯಿತು. ಆದರೆ ಒಂದು ಆಶ್ಚರ್ಯ! ಅನಿರೀಕ್ಷಿತ! ಹೊಟ್ಟೆ ನೋವೆ ಇಲ್ಲ! ಆಗ ಮಹದೇವಯ್ಯನಿಗೆ ಜ್ಞಾನೋದಯ ವಾಯಿತು. ತನಗೆ ಒಂದು ನಿರ್ದಿಷ್ಟವಾದ ವ್ಯಾಯಾಮಬೇಕೆಂಬುವದರ ಅರಿವಾಯಿತು. ಈಗ ಅವನು ಬಿಲ್ಡ್ ಯುವರ್ ಬಾಡಿ ಫಿಸಿಕಲ್ ಕಲ್ಚರ್ ಇನ್‌ಸ್ಟಿಟ್ಯೂಟಿನ ವಿದ್ಯಾರ್ಥಿ!

• • • • • •

# ಶಾಂತಿ

ಆ ರಾತ್ರಿ ನಾರಾಯಣಮೂರ್ತಿ ಎರಡೇ ತುತ್ತು ಊಟಮಾಡಿ ಆಪೋಶನ ತೆಗೆದುಕೊಂಡು ಎದ್ದ. "ಇದೇನೋ ನಾಣೂ ಸ್ವಲ್ಪವೂ ಊಟ ಮಾಡಿಲ್ಲಾ. ಮಧ್ಯಾಹ್ನದಮೇಲೆ ತಿಂಡಿಯನ್ನೂ ತಿಂದಿರಲಿಲ್ಲ. ಯಾಕೋ ಹೀಗೆ?" ಎಂದು ನೊಂದು ನುಡಿದಳು ಅವನ ತಾಯಿ. ಏನೋ ಹಸಿವೇ ಆಗಿಲ್ಲಮ್ಮ ಎಂದು ಹೇಳಿ ನಾರಾಯಣಮೂರ್ತಿ ಎದ್ದು ಹೋಗಿ ಕೈ ತೊಳೆದುಕೊಂಡೇಬಿಟ್ಟ. "ಯಾಕಪ್ಪ ಅಡಿಗೆ ಚೆನ್ನಾಗಿಲ್ಲ ವೇನೋ" ಎಂದು ಕೇಳಿದ ಪ್ರಶ್ನೆಗೆ ಉತ್ತರ ಕೊಡಲೂ ಇಲ್ಲ.

ಸಂಜೆ ತೋಟದ ಕಡೆಗೆ ವಾಕಿಂಗ್ ಹೋಗಿದ್ದ. ಹಿಂತಿರುಗುವಾಗ ಕೆರೆಯ ಏರಿಯನ್ನು ದಾಟಿ ತೋಟದ ಮಗ್ಗುಲಿಗೆ ಬಂದಾಗ ತಟಕ್ಕನೆ ನಿಂತ. ನಾಲ್ಕಾರು ಮಾರು ದೂರದಲ್ಲಿ ಬೇಲಿಗೆ ಹಬ್ಬಿದ ಬಳ್ಳಿಯಿಂದ ಮಲ್ಲಿಗೆಯನ್ನು ಬಿಡಿಸುತ್ತ ಅವಳು ನಿಂತಿದ್ದಳು. ಅವನನ್ನು ಅವಳು ಕಾಣಲಿಲ್ಲ. ನಾರಾಯಣಮೂರ್ತಿಗಾದರೂ ಅವಳ ಮುಖ ಕಾಣಲಿಲ್ಲ. ಆದರೂ ಅವಳ ನಿಲುವಿಕೆ ಆಳ್ತನಗಳು ಅವನಿಗೆ ಚಲುವಾಗಿ ಕಂಡವು. ನಿಧಾನವಾಗಿ ಮುಂದೆ ಬಂದನು. ಆಗ ಅವಳು ಇವನ ಕಡೆ ತಿರುಗಿದಳು. ನಿಜವಾಗಿಯೂ ಚೆಲುವೆಯಾಗಿದ್ದಳು. ಅವಳನ್ನು ಅಲ್ಲಿ ಕಂಡಾಗಿನಿಂದ ನಾರಾಯಣಮೂರ್ತಿ ಹೀಗಾಗಿದ್ದ! ತನಗೆ ತಾನರಿಯದೆ ಅವಳನ್ನು ಪ್ರೇಮಿಸಿದ್ದ ಅವನು!

ಊಟಮಾಡಿ ಕೈ ತೊಳೆದವನೇ ನಾರಾಯಣಮೂರ್ತಿ ಹೊರಗೆ ಬಂದು ಮನೆಯ ಮುಂದುಗಡೆ ಅಂಗಳದಲ್ಲಿ ಕುಳಿತ. ಹುಣ್ಣಿಮೆಯಾಗಿ ವಾರದಮೇಲಾಗಿತ್ತು. ಆ ಕತ್ತಲು ರಾತ್ರಿಯಲ್ಲಿ ಬರೀ ನಕ್ಷತ್ರಗಳ ಬೆಳಕಿನಿಂದ ಎಲ್ಲವು ಅತಿ ಮಸುಕುಮಸುಕಾಗಿ ತೋರುತ್ತಿದ್ದುವು. ಅನತಿ ದೂರದಲ್ಲಿರುವ ಅಡಿಕೆ ತೋಟದಿಂದ ಗಾಳಿ

ಸುಳಿದ ಸುಯ್ಯೆಂಬ ಶಬ್ದ ಕೇಳುತ್ತಿತ್ತು. ಆದರೆ ನಾರಾಯಣ ಮೂರ್ತಿಗೆ ಆಗ ಅವುಗಳೆಲ್ಲದರ ಕಡೆ ಲಕ್ಷ್ಯವಿರಲಿಲ್ಲ. ಅವನಿಗೆ ಏನೂ ಕೇಳಿಸಲಿಲ್ಲ; ಯಾವುದೂ ಕಾಣಿಸಲಿಲ್ಲ! ಅವನ ತಲೆ ತುಂಬ ಅವಳ ಯೋಚನೆಯೇ ತುಂಬಿತ್ತು. ಅವಳು ಯಾರಾಗಿರಬಹುದೆಂದು ಹಲವು ಪರಿ ಯೋಚಿಸಿ ಬಗೆಹರಿಯದೆ ಕುಳಿತನು. ಅವಳಿಗೆ ಲಗ್ನ ವಾಗಿರಬಹುದೇ ಎಂದು ಯೋಚಿಸಿದನು. ಈ ಯೋಚನೆ ಬಂದಾಗ ದೇಹ ಒಂದು ಸಲ ಪುಳುಕಿತವಾಯಿತು. ಸಂಜೆ ತಾನು ತೋಟದ ಬಳಿ ಅವಳನ್ನು ಕಂಡಾಗ ಅವಳ ಕಾಲ್ಬೆರಳುಗಳನ್ನು ನೋಡಬೇಕಿತ್ತು ಎಂದುಕೊಂಡನು. ತಮ್ಮ ಊರಿನ ಹುಡುಗ ಹುಡುಗಿಯರ ಪರಿಚಿತಿ ತನಗಿಲ್ಲವೆ? ಅವಳು ಬೇರೆ ಊರಿನವಳೇ ಇರಬೇಕು. ಪುನಃ ಅವಳನ್ನು ಮನದಣಿಯೆ ನೋಡಬೇಕೆಂದುಕೊಂಡನು. ಒಳಗಿನಿಂದ ತಾಯಿ ಕೂಗಿದರು, "ನಾಣೂ ಮಲಗಲು ಹೊತ್ತಾಗಿಲ್ಲವೇನೋ ಕತ್ತಲೆಯಲ್ಲಿ ಏನು ಮಾಡುವೆ, ಒಳಗೆ ಬಾರೋ" ಎಂದು.

ನಾರಾಯಣಮೂರ್ತಿ ಎದ್ದು ತಲೆಬಾಗಿಲನ್ನು ಹಾಕಿಕೊಂಡು ಒಳಗೆ ಹೋದ.

ಮನೆಯಲ್ಲಿ ನಾರಾಯಣಮೂರ್ತಿ, ಅವನ ಚಿಕ್ಕತಮ್ಮ ಮತ್ತು ಅವನ ತಾಯಿ, ಹೀಗೆ ಮೂವರೇ ಇರುವುದು. ನಾರಾಯಣಮೂರ್ತಿ ವಿದ್ಯಾಭ್ಯಾಸಕ್ಕೆಂದು ಪಟ್ಟಣಕ್ಕೆ ಹೋಗಿ ವರ್ಷದ ಮೇಲಾಗಿತ್ತು. ಅದೇ ಬೇಸಿಗೆಯ ರಜಕ್ಕೆ ಊರಿಗೆ ಬಂದಿದ್ದನು. ಊರಿಗೆ ಬಂದ ಮೊದಲ ನಾಲ್ಕೈದು ದಿನಗಳನ್ನು ನಿದ್ದೆಯಲ್ಲಿಯೇ ಕಳೆದಿದ್ದನೇ ಹೊರತು ಊರಿನ ಯಾರನ್ನು ಕಂಡೂ ಮಾತಾಡಿರಲಿಲ್ಲ. ಅದೇ ನಾಲ್ಕನೆಯ ದಿನದ ಸಂಜೆ "ವಾಕಿಂಗ್" ಹೋದಾಗಲೇ ಅವನ ಜೀವನದಲ್ಲಿ ಅನಿರೀಕ್ಷಿತವಾದ ಆಕಸ್ಮಾತ್ತಾದ ಒಂದು ಹೊಸ ಅನುಭವ ಆಸೆ ಬದಲಾವಣೆಗಳು ಮೂಡಿದುವು. ಅವನ ಹಸಿವು ನಿದ್ದೆಗಳು ಎಲ್ಲಿ ಓಡಿದುವೊ. ಅವನ ಲಕ್ಷ್ಯವೆಲ್ಲ ಒಂದರ ಮೇಲೆ ಮಾತ್ರ ಇತ್ತು!

ರಾತ್ರಿ ಸುಮಾರು ಮೂರುಗಂಟೆಯವರೆಗೂ ಅವನಿಗೆ ನಿದ್ದೆ ಬರಲಿಲ್ಲ. ಅವಳ ವಿಚಾರವಾಗಿ ಯಾರನ್ನು ಕೇಳಬೇಕು ಎಂದು ಯೋಚಿಸಿ ಬಗೆಹರಿಯದೆ ಹಾಗೆಯೇ ಮಲಗಿದ.

ಲಲಿತಳು ನಮ್ಮ ಊರಿನ ಪಟೇಲ ರಾಮಯ್ಯನವರ ಅಕ್ಕನ ಮಗಳು. ಅವಳು ಅನಿರೀಕ್ಷಿತವಾಗಿ ತಬ್ಬಲಿಯಾದುದರಿಂದ ಸೋದರ ಮಾವನ ಮನೆ ಸೇರಬೇಕಾಯಿತು. ಗುಣ ನಡತೆ ಮಾತು ಕತೆಗಳಲ್ಲಿ ಎಲ್ಲರಿಗೂ ಮೆಚ್ಚಾಗಿದ್ದಳು. ಮದುವೆಯ ವಯಸ್ಸು ಬಂದು ಒಂದೆರಡುವರ್ಷಗಳಾಗಿತ್ತು.

ಅವಳನ್ನು ಮತ್ತೆ ಕಂಡೇನೆಂಬ ಆಸೆಯಿಂದ ನಾರಾಯಣಮೂರ್ತಿ ಒಂದೆರಡು ದಿನ ಅದೇ ಕಡೆ ವಾಕಿಂಗ್ ಹೋದ. ಆದರೆ ಅವನಿಗೆ ಅವಳ ದರ್ಶನ ದೊರೆಯಲಿಲ್ಲ. ಕೊನೆಗೊಂದು ದಿನ ಏನೋ ನೆಪ ಮಾಡಿಕೊಂಡು ಪಟೇಲರ ಮನೆಗೆ ಹೋದ. ಅಪರೂಪವಾಗಿ ಬಂದವನೆಂದು ಉಪಚಾರಗಳೆಲ್ಲ ಆಯಿತು. ಲಲಿತಳ ದರ್ಶನವೂ ಆಯಿತು. ಅವಳಿಗೆ ಲಗ್ನವಾಗಿಲ್ಲವೆಂದು ತನ್ನಲ್ಲಿ ತಾನೇ ನಿಶ್ಚಯ ಮಾಡಿಕೊಂಡು ಮನೆಗೆ ಮರಳಿದನು.

ಪಟೇಲರ ಮನೆಗೆ ನಾರಾಯಣಮೂರ್ತಿಯ ತಿರುಗಾಟ ಹೆಚ್ಚಾಯಿತು! ಅವಳ ಪರಿಚಯ ಚೆನ್ನಾಗಿ ಆಯಿತು. ತೋಟದಲ್ಲಿ ಕೆರೆಯ ಏರಿಯಮೇಲೆ, ಹೂ ಕೊಯ್ಯುವಾಗ, ದೇವಸ್ಥಾನದಲ್ಲಿ, ಪಕ್ಕದ ಮನೆಯಲ್ಲಿ—ಹೀಗೆ ಹಲವು ಕಡೆ ಅವಳನ್ನು ಕಂಡನು. ಪರಸ್ಪರ ಮಾತು ಕತೆಗಳಲ್ಲಿ ಅಂಜಿಕೆ ಅಳುಕುಗಳು ಉಳಿಯಲಿಲ್ಲ. ಅವಳೊಡನೆ ಒಡನಾಟ ಹೆಚ್ಚಾದಂತೆಲ್ಲ ಅವನು ಅವಳನ್ನು ಹೆಚ್ಚು ಹೆಚ್ಚಾಗಿ ಪ್ರೀತಿಸಿದನು. ಆದರೆ ತನ್ನ ಆಸೆಯನ್ನು ತಾಯಿಯೊಡನಾಗಲೀ, ಇತರರೊಡನಾಗಲೀ ಹೇಳಿಕೊಳ್ಳುವಷ್ಟು ಧೈರ್ಯವಿರಲಿಲ್ಲ.

ಪರೀಕ್ಷೆಯ ಪರಿಣಾಮವನ್ನು ನೋಡಲು ನಾರಾಯಣಮೂರ್ತಿ ಮೂರುದಿನದ ಮಟ್ಟಿಗೆ ಪಟ್ಟಣಕ್ಕೆ ಹೋದ. ಊರಿಗೆ ಹಿಂತಿರುಗಿದಾಗ

ಅವನ ಮುಖಕ್ಕೆ ಕಳೆ ಬಂದಿತ್ತು. ಮಾತು ಕತೆಗಳಲ್ಲಿ ಉತ್ಸಾಹ ತುಂಬಿತ್ತು. ಅವನು ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದನು.

ರಾತ್ರಿ ಊಟ ಮಾಡಿ ನಡುಮನೆಯಲ್ಲಿ ಕುಳಿತಿದ್ದನು. ತಾಯಿ ಅಡಿಕೆಎಲೆಯನ್ನು ಮೆಲ್ಲುತ್ತ ಪಕ್ಕದಲ್ಲಿ ಗೋಡೆಗೆ ಒರಗಿ ಕುಳಿತಿದ್ದವರು "ಪಠೇಲ್ರ ಸೊಸೀಗೆ ಒಂದು ಲಗ್ನ ಗೊತ್ತಾದಂಗಾತು" ಎಂದರು. ಅವರ ಮುಂದಿನ ಮಾತು ಹೊರಬೀಳುವುದರೊಳಗಾಗಿ ನಾರಾಯಣ ಮೂರ್ತಿ ಆಂ ಎಂದು ಕಣ್ಣರಳಿಸಿ ತಾಯಿಯ ಮುಖವನ್ನು ನೋಡಿದ! ಆ ಹರಳೆಣ್ಣೆಯ ದೀಪದ ಬೆಳಕು ಸಾಲಲಿಲ್ಲವೋ ಅಥವಾ ಅವನ ತಾಯಿ ಗಮನಿಸಲಿಲ್ಲವೋ ಅಂತೂ ಅವನ ಮುಖದಲ್ಲಿ ಆದ ಭಾವಬದಲಾವಣೆ ಅವಳಿಗೆ ಕಾಣಲಿಲ್ಲ! ಅವನಿಗಾದ ಆಶ್ಚರ್ಯದ ಅರಿವು ಅವಳಿಗಾಗಲೂ ಇಲ್ಲ. ತಾಯಿ ಮತ್ತೆ ಮಾತನ್ನು ಮುಂದುವರಿಸಿದಳು.

"ಕಡೇ ಮನೆ ಗೋವಿಂದಗೆ ಕೊಡಕ್ಕು ಅಂತ ನಿಕ್ಕಿ ಆತು. ಜಾತಗ ಲಾಯಖ್ಖಾಗಿ ಕೂಡ್ತದ. ಶಷ್ಟಾಟಕ ಏನೂ ಇಲ್ಯಡ, ಒಳ್ಳೇದಾತು" ಎಂದು ಹೇಳಿದರು. ತಮ್ಮ ಮಾತಿನಿಂದ ಮಗನಿಗೆ ಎಂಥ ವೇಧನೆಯಾಯಿತು, ಅವನ ಮನಸ್ಸಿನಲ್ಲಿ ಎಂಥ ಅಂದೋಳನ ನಡೆಯತೊಡಗಿತು ಎಂಬುದನ್ನು, ಪಾಪ ಅವರು ಅರಿಯರು.

ನಾರಾಯಣಮೂರ್ತಿಗೆ ತಾನೆಲ್ಲಿರುವೆನೆಂಬುದರ ಅರಿವು ಇಲ್ಲದಾಯಿತು. ಮನೆ, ಮಾಳಿಗೆ, ದೀಪ ಎಲ್ಲವೂ ಸುತ್ತುತ್ತಿದ್ದಂತೆ ಕಂಡಿತು. ತನಗೆ ತಾನರಿಯದೆಯೇ ಎದ್ದುಹೋಗಿ ಹಾಸಿಗೆಯಮೇಲೆ ಉರುಳಿಕೊಂಡನು. ಅರಿವು ಬಂದು ಮನಸ್ಸು ಸ್ಥಿಮಿತಕ್ಕೆ ಬಂದಾಗ ತಲೆದಿಂಬು ಕಣ್ಣೀರಿಂದ ತೋಯ್ದುಹೋದುದನ್ನು ಕಂಡನು.

ಅಂದಿನಿಂದ ಅವನ ಮಾತುಕತೆಗಳು ಕಡಿಮೆಯಾದುವು. ಊಟ ಉಪಚಾರಗಳಲ್ಲಿ ಹೊತ್ತುಗೊತ್ತುಗಳಿರಲಿಲ್ಲ. ಮನೆಯನ್ನು ಬಿಟ್ಟು ಕದಲದಾದನು.

ಗೋವಿಂದನು ಅವನ ಬಾಲ್ಯಸ್ನೇಹಿತ. ಇಬ್ಬರೂ ಒಟ್ಟಿಗೆ ಕೂಡಿ ಆಡಿ ಬೆಳೆದವರು. ಆದರೆ ಅಂದಿನಿಂದ ನಾರಾಯಣಮೂರ್ತಿ ಅವನನ್ನು ಕಾಣಲೇ ಇಲ್ಲ. ಅವನಿಗೆ ಯಾವುದೂ ಬೇಡವಾಗಿತ್ತು.

"ಎಲ್ಲಿ ನಿನ್ನ ಮಗನಿಗೆ ಪರೀಕ್ಷೆ ಪಾಸಾಯಿತಂತೆ. ಹೊರಗೆ ಬರುವುದಿಲ್ಲ. ಎಲ್ಲೂ ಕಾಣುವುದೂ ಇಲ್ಲ" ಎಂದು ಅಕ್ಕಪಕ್ಕದವರು ಕೇಳಿದ್ದಕ್ಕೆ ಅವನ ತಾಯಿ "ಪಾಪ ಅವನು ಪರೀಕ್ಷೆಗೇ ಎಂತ ಹಗಲೂ ರಾತ್ರಿ ಓದಿ ಸುಸ್ತಾಗಿರಬೇಕು. ಮನೆಯಲ್ಲೂ ಅಷ್ಟೇ ಮಾತಿಲ್ಲ, ಕತೆ ಇಲ್ಲ, ಊಟವಿಲ್ಲ, ಉಡಿಗೆ ಇಲ್ಲ" ಎಂದು ಉಸಿರ್ಗರೆದರು.

ಲಲಿತಳ ಮದುವೆ ಇನ್ನೊಂದುವಾರವಿದೆ ಎನ್ನುವಾಗ ನಾಣಿ ಯಾರೋ ಗೆಳೆಯರೊಬ್ಬರ ಮನೆಗೆ ಹೋಗಬೇಕೆಂದು ಹೇಳಿ ಊರಿಂದ ಹೊರಟುಹೋದನು. ಸ್ಥಳ ಬದಲಾವಣೆ ಆದರೆ ಮಗನ ತನುಮನ ಗಳಿಗೆ ಶಾಂತಿ ಸಿಗಬಹುದೆಂದು ಅಂದುಕೊಂಡು ಅವನ ತಾಯಿಯು ಸುಮ್ಮನಾದರು.

ರಜೆ ಕಳೆದು ಪುನಃ ಶಾಲೆ ಪ್ರಾರಂಭವಾಯಿತು. ನಾರಾಯಣ ಮೂರ್ತಿ ಮುಂದಿನ ವಿದ್ಯಾಭ್ಯಾಸಕ್ಕೆಂದು ಹೊರಟುಹೋದ. ತಿಂಗಳು ಗಳುರುಳಿದುವು. ಒಂದು ದಿನ ಕೋರ್ಟಿನ ಕೆಲಸಕ್ಕೆಂದು ಅವನ ಊರಿನಿಂದ ಅವನ ಪಕ್ಕದ ಮನೆಯವರು ಬಂದಿದ್ದರು. ಅವರು ಇವನ ತಾಯಿ ತನ್ನನ ಕ್ಷೇಮಸಮಾಚಾರವನ್ನು ತಿಳಿಸುವುದರ ಜತೆಗೆ ಊರಿನ ಎಲ್ಲಾ ಸುದ್ದಿಯನ್ನೂ ತಿಳಿಸುತ್ತ ಲಲಿತೆಯು ಬಸಿರಿ ಎಂಬುದನ್ನು ಹೇಳಿದರು.

ಕೊನೆಯ ಈ ಸುದ್ದಿ ಕೇಳಿ ಅಸೂಯೆ ಆಶಾಭಂಗ ಅಸಹನೆ ಗಳಿಂದ ನೊಂದು ಬೆಂದು ಕುದಿದು ಹೋಗುವುದರ ಬದಲಾಗಿ ನಾರಾಯಣಮೂರ್ತಿಗೆ ಅನಿರೀಕ್ಷಿತವಾಗಿ ಒಂದು ಶಾಂತಿ ಬಂದಿತು. ಈಗ ಎಲ್ಲವೂ ಸ್ಥಿಮಿತಕ್ಕೆ ಬಂದಿತು ಎಂದು ಅವನಿಗೆ ಅನ್ನಿಸಿತು.

ಯೋಚನೆಗೂ ನಿಲುಕಲಾರದಷ್ಟು ದೂರ ತಮ್ಮಿಬ್ಬರನ್ನೂ ಇದು ಮಾಡಿತು ಎಂದುಕೊಂಡನು.

ದಿನಗಳು ಎಂದಿನಂತೆ ಉರುಳುತ್ತಿದ್ದುವು. ಅವನ ಜೀವನದಲ್ಲಿ ಉಬ್ಬರವಿಳಿತಗಳೇನೂ ಇರಲಿಲ್ಲ. ಅವನ ಅಭ್ಯಾಸಕ್ಕಾಗಲೀ, ಮನದ ಶಾಂತಿಗಾಗಲೀ ಹಿಂದಿನ ವಿಷಯಗಳಿಂದ ಅಡಚಣೆಯಾಗಲಿಲ್ಲ. ಪರೀಕ್ಷೆಯ ಕಾಲವೂ ಬಂದಿತು. ಅದನ್ನು ಮುಗಿಸಿಕೊಂಡು ಊರಿಗೆ ಹೊರಟನು. ಈಸಲ ಊರಿಗೆ ಹೋಗುವಾಗ ಮನಸ್ಸು ಹಗುರವಾಗಿಯೇ ಇತ್ತು.

ಊರ ಬಾಗಿಲ ಕೆರೆಯ ಬಳಿಗೆ ಬಂದಾಗ ಅಲ್ಲಿ ತುಂಬ ಜನ ಸೇರಿದುದು ದೂರದಿಂದ ಕಂಡಿತು. ಹತ್ತಿರ ಹತ್ತಿರ ಬರುವಾಗ ಏನೋ ಅಪಘಾತ ನಡೆದಿದೆ ಅನ್ನಿಸಿತು. ಜನರ ಗುಂಪಿನ ಬಳಿಗೆ ಬಂದಾಗ ಇವನನ್ನು ಮೊದಲು ಗೋವಿಂದನೇ ಮಾತನಾಡಿಸಿದನು "ಎಲ್ಲಾ ಆಗಿಹೋಯಿತೋ ನಾಣೂ; ಈಗ ತಾನೆ ಬೆಂಕಿಗೆ ಹಾಕಿ ಬಂದೆ. ಅವಳ ನೆನಪಿಗಾಗಿ ಶಿಶು ಒಂದು ಮಾತ್ರ ಉಳಿದಿದೆ" ಎನ್ನುತ್ತ ನಾರಾಯಣಮೂರ್ತಿಯ ಕಾಲುಬಳಿ ಕುಸಿದುಕುಳಿತನು.

ತನ್ನ ಪ್ರೇಮವನ್ನು ಕರುಣೆ ಇಲ್ಲದೆ ವಿಧಿಯು ಕೊಲೆ ಮಾಡಿತು. ಗೋವಿಂದನೂ ತನ್ನಂತೇ ಪರದೇಶಿಯಾದನು ಎಂದು ನಾರಾಯಣಮೂರ್ತಿಗೆ ಅನ್ನಿಸಿತು. ಗೋವಿಂದನ ಕೈ ಹಿಡಿದುಕೊಂಡು ನಿಧಾನವಾಗಿ ಊರಕಡೆ ನಡೆದನು ನಾರಾಯಣಮೂರ್ತಿ.

. . . . . .

# ನಾವು ಮಾಡಿದ ಒಂದು ಜಾತ್ರೆ

ಬಹು ದಿನಗಳ ಮಾತು. ಅಂದರೆ ದ್ವಾಪರಯುಗಕ್ಕೆ ಸೇರಿದು ದೇನೂ ಅಲ್ಲ. ನಾನಿನ್ನೂ ಆಗ ಪ್ರಾಯಕ್ಕೆ ಬರುತ್ತಿದ್ದೆನಷ್ಟೆ. ನಮ್ಮೂರಿನಲ್ಲಿ ನಮ್ಮದೇ ಒಂದು ಸಂಗಡವಿತ್ತು. ನಮ್ಮ ಸಂಗಡದಲ್ಲಿ ನಾವು ಐದಾರು ಜನರಿದ್ದೆವು. ಆಗ ನಡೆದುದು ಇದು. ಕೆಳದಿ ಜಾತ್ರೆ ಬಹು ಪ್ರಸಿದ್ಧವಾದುದು ನಮ್ಮ ಕಡೆ. ನಮ್ಮ ಹಿರಿಯರೆಲ್ಲರೂ ಹೋಗಿ ಬಂದಿದ್ದರು, ಈ ಸಾರಿ ನಾವೂ ಹೋಗಬಾರದೇಕೆ ಎನ್ನಿಸಿತು. ಉಳಿದವರನ್ನೂ ವಿಚಾರಿಸೋಣ ಅಂತ ಪಕ್ಕದ ಮನೆ ಶಾಮಣ್ಣನ ಮನೆಗೆ ಹೋದೆ. "ಏನೋ ವೆಂಕೂ ಬಂದೇ" ಅಂದರು ಶಾಮಣ್ಣ.

"ಏನಿಲ್ಲ, ರಾಘು ಇದಾನೇನೂ?" ಎಂದೆ.

"ತೋಟದ ಕಡೆ ಎಲ್ಲೋ ಹೋಗಿರಬೇಕು...."

ಅವರ ಮಾತು ಮುಗಿಯುವುದರೊಳಗಾಗಿಯೇ ನಾನು ಅಲ್ಲಿಂದ ಗಾಡೀ ಬಿಟ್ಟಿದ್ದೆ. ಏಕೆಂದರೆ ಅವರು ಹುಡುಗರು ಏನೋ ಸಂಚು ಮಾಡಿದ್ದಾರೆ ಅಂತ ವಿಚಾರಿಸಲು ಮೊದಲುಮಾಡುತ್ತಾರೆ. ಕಪ್ಪೆ ಹಿಡಿದು ಕೊಳಗ ತುಂಬಿದಹಾಗಾಯ್ತು ನನಗೆ ಎಲ್ಲರನ್ನೂ ಸೇರಿಸಲು! ಅಂತೂ ಜಾತ್ರೆಗೆ ಹೋಗುವುದು ನಿಶ್ಚಯವಾಯಿತು. ಒಬ್ಬ ಗಾಡಿ ಮಾಡಿಸೋಣ ಎಂದ. ಮತ್ತೊಬ್ಬ ನಡೆದೇ ಹೋಗೋಣ ಎಂದ. ಇನ್ನೊಬ್ಬ "ಲೋ. ಕಡೇ ಮನೆ ಗಾಡಿ ಹೋಗುತ್ತಂತ್ರೋ! ನಾವೂ ಸ್ವಲ್ಪ ಜಾಗ ಹಿಡಿಯೋಣ" ಅಂದ. ಅಂತೂ ಇಂತೂ ಪಂಚಾಯಿತಿ ಯಾಗಿ ನಡೆದೇ ಹೋಗುವುದು ಅಂತಾಯಿತು.

ಮಾರನೇ ದಿನ ನೋಡಿದರೆ ಕಡೇ ಮನೆ ಗಾಡಿ ನಮಗೆ ಚಕ್ಕರ್ ಕೊಟ್ಟು ನಡೆದಿತ್ತು. ಸರಿ ಗೋಪಿ, ಶೀನ ಇಬ್ಬರೂ ತಿಂಡಿ ಕಟ್ಟಿಸಿ ಕೊಂಡು ನಮ್ಮ ಮನೆಗೇ ಬಂದರು. ಅನಂತೂಗೆ, ಅವರಮ್ಮ ರಾತ್ರಿ

ಮುಟ್ಟಾದರಂತೆ ಅದಕ್ಕೆ ಅವನು ವಿರಾಟರಾಯನ ಮನೆಯ ಭೀಮ ನಾಗಿದ್ದ! ಉಳಿದವನು ರಾಘು. ಅವನ್ನ ಕರೆಯೋಣವೆಂತ ಅವನ ಮನೆಗೆ ಹೋದೆ ನಾನು. ಅಲ್ಹೋಗಿ ನೋಡಿದರೆ ದೊಡ್ಡ ಗಲಾಟೀನೇ ನಡೆದಿದೆ. ಆವನ ಮನೆಗೆ ಒಬ್ಬ 'ಪಾತಾಳಲೋಕದ ಭಟ್ಟ' ಬಂದಿದ್ದ. ಶಾಮಣ್ಣನವರು "ಆವನ್ನೂ ಕರಕೊಂಡ್ಹೋಗ್ರೊ ಪಾಪ! ಹಾದಿ ತಿಳಿಯದು" ಅಂತ ಹೇಳ್ತಿದ್ರು. ರಾಘು "ಅವನು ಖಂಡಿತ ನಮ್ಮ ಜೊತೆಗೆ ಬೇಡ" ಅನ್ನುತ್ತಿದ್ದ. ಅಂತೂ ಇಬ್ಬರನ್ನೂ ಸಮಾಧಾನ ಮಾಡಿ ಪಾತಾಳಲೋಕದವನನ್ನು ಕರೆದುಕೊಂಡೇ ಹೊರಟೆವು. ನಮ್ಮ ಸರಂಜಾಮುಗಳನ್ನೆಲ್ಲಾ ಮಾಡಿ ಹೊರಡುವ ಹೊತ್ತಿಗೆ ಬಿಸಿಲು ಮರದ ತುದಿಗೆ ಹೋಗಿತ್ತು.

ಮನೆ ಬಿಟ್ಟು ಹೊರಟದ್ದೇ ತಡ, ಗಂಗಮ್ಮ ಬಂದು "ಅಪ್ಪೀ, ಯಮ್ಮನೇ ಕೂಸಿಗೆ ಒಂದು ಚೌಲೀ ಬಾಲ ಬೇಕಡ, ತಂದುಕೊಡ" ಅಂತ ರಾಗ ಎಳೆದಳು. ರಾಮಣ್ಣನವರ ವೆಂಕಮ್ಮ ಬಂದು, "ವೆಂಕೂ ನೋಡ ಯಮ್ಮನೇರ ಹತ್ರ ಎಷ್ಟು ಸಲ ಹೇಳಿದ್ರೂ ತಪ್ಪಿಲ್ಲೆ. ಮಂಗಳ್ಗೌರೀಗೆ ಆರ್ಥಿ ಎತ್ತಲೆ ಗಿಣಿಲು ಒಂದೂ ಇಲ್ಲೆ. ನಾಕು ಜೊತಿಗಿಣಿಲು ತಂದ್ಕೊಡ" ಅಂದರು. ನಾಲ್ಕನೆ ಮನೆ ಜೋಡುಗುಮ್ಮ ಬಂದು (ಜೋಡುಗುಮ್ಮ ಅಂತ ಶೀನಿ ಇಟ್ಟ ಹೆಸರು. ಅವರ ನಿಜವಾದ ಹೆಸರು ವೆಂಕಪ್ಪ ಅಂತ. ಏನು ಹೇಳಿದರೂ ಅವರು ಹುಂ ಹುಂ ಎನ್ನುತ್ತಿದ್ದರು. ಅದಕ್ಕೆ ಅವರಿಗೆ ಜೋಡುಗುಮ್ಮ ಅಂತ ಹೆಸರು ಬಿತ್ತು.) "ಹುಡುಗ್ರಾ ಹಂಡೆ ದರ ಹ್ಯಾಗಿದ್ದೂ ಕೇಳ್ಕಂಡು ಬರ್ರೊ. ಅಡಿಕೆ ಕುಚ್ಚಲೆ, ಒಂದು ಹಂಡೆ ಬೇಕಾಯ್ದು" ಅಂತ ಅಂದ. ಹೀಗೆ ನಾವು ಇದ್ದು ಬಿದ್ದ ಕೆಲಸವನ್ನೆಲ್ಲ ಒಪ್ಪಿಕೊಂಡು ನಡುಮನೆ ಸೀತಕ್ಕ, ರಾಮಣ್ಣ ಇವರೆಲ್ಲ "ತೇರು ಮಾಡಲೆ ಹೊರಟ್ರಿನ್ರಾ" ಎಂತ ಕೇಳಿದ್ದಕ್ಕೆ ಹೂಂಗುಟ್ಟಿ, ಎಲ್ಲರೂ ಸಪ್ತಸ್ವರಗಳಲ್ಲಿಯೂ "ಜ್ವಾಕೇ" (ಜೋಕೆ) ಅಂತ ಹೇಳಿ ಕೂಗುವುದನ್ನು ಕೇಳುತ್ತಾ

ಊರು ಬಿಡುವುದಾಯಿತು. ಅದನ್ನು ಯಾರಾದರೂ ನೋಡಿದ್ದರೆ "ಈ ಊರಿನ ರಾಮನನ್ನು ಕಾಡಿಗೆ ಕಳುಹಿಸುತ್ತಾರೇನೋ" ಅಂತ ತಿಳಿದುಕೊಳ್ಳಬೇಕಾಗುತ್ತಿತ್ತು.

ಊರು ದಾಟಿದ ಮೇಲೆ ನಮ್ಮದೇ ರಾಜ್ಯ! ಹರಟೆಗೆ ಶುರುವಾಯಿತು. ಶೀನ ತಾನು ಮಾವನ ಮನೆ ಹಬ್ಬ ಮಾಡಿಕೊಂಡು ಬಂದ ಸುದ್ದಿ ಹೇಳಿದ. ಗೋಪಿ ತಮ್ಮನೆ ತೋಟಕ್ಕೆ ಕೊಳೇರೋಗ ಬಂದಿದ್ದು ಅದಕ್ಕೆ ಔಷಧ ಹಾಕಲು ಬೀರ ಬಾರದಿದ್ದದ್ದೂ, ಅಡಿಕೆ ಉದುರಿ ಹೋದದ್ದೂ ಎಲ್ಲಾ ಹೇಳಿ ಆಳು ಕಾಳುಗಳನ್ನು ಹೇಗೆ ಇಟ್ಟುಕೊಳ್ಳಬೇಕೆಂಬ ವಿಷಯದಲ್ಲಿ ಒಂದು ಭಾರೀ ಭಾಷಣ ಮಾಡಿದ! ಇಷ್ಟೊತ್ತು ಸುಮ್ಮನಿದ್ದ ರಾಘು ಪಾತಾಳಲೋಕದವನನ್ನು ಗೇಲಿ ಮಾಡಲು ಪ್ರಾರಂಭಿಸಿದ.

"ಏನ್ರಾ ಭಟ್ರೆ ಗಂಟಿನಾಗೆ ರೂಪಾಯಿ ಎಷ್ಟಿದ್ರಾ?"

"ರೂಪಾಯಿ ಎಲ್ಬಂತ್ರಾ? ಈ ದಿನ್ದಾಗೆ, ಯಾರೂ ಸರ್ಥೀನೇ ಕೊಡೋದಿಲ್ರಾ. ಗಟ್ಟ ಹತ್ತಿ ಬರೋ ಖರ್ಚು ಹುಟ್ಟಾದಿಲ್ಲೆ. ಸುಮ್ಗೆ ಮನೇಲಿರೋದೆ ವಾಸಿ" ಎಂದ ಭಟ್ಟ.

"ಒಳ್ಳೇ ಮಾತ್ನಿಂದ ಇದ್ದದ್ದನ್ನೆಲ್ಲಾ ಕೊಡ್ತೀರೋ ಇಲ್ವೆ......" ರಾಘು 'ಮೈನೋಡಿ ಮಾತ್ನಾಡೋ ಮುಠ್ಠೈ' ಅನ್ನೋ ಹಾಗೆ ಮಾಡಿದ.

ಭಟ್ಟರು ಹಾ! ಹಾ! ಅಂತ ಹಲ್ಲುಕಿರಿದರು.

ಅಷ್ಟರಲ್ಲಿ ನಾವು ಸ್ವರವೆತ್ತದಿದ್ದರೆ ರಾಘು ಭಟ್ಟನನ್ನು ಇನ್ನೂ ಹೆದರಿಸುತ್ತಿದ್ದನೇನೋ. ಮಾತಿನ ಭರದಲ್ಲಿ ಹಾದಿ ತಪ್ಪಿಹೋಗಿದ್ದಿತು. (ತಪ್ಪಿಹೋದವರು ನಾವು!) ಅಂತೂ ಎಲ್ಲೆಲ್ಲೋ ಸುತ್ತಿ ರಾತ್ರಿ ಹತ್ತು ಘಂಟೆಗೆ ಒಂದು ಹಳ್ಳಿಯನ್ನು ತಲುಪಿದೆವು. ಆ ಕತ್ತಲ ಕಾಡಿನಲ್ಲಿ ಕಲ್ಲುಮುಳ್ಳುಗಳನ್ನು ತುಳಿದು ತಿರುಗುವುದೆಂದರೆ, ದೇವರೇ ಜಾತ್ರೆ ಗೀತ್ರೆ ಒಂದೂ ಬೇಡ ಅನ್ನುವಷ್ಟು ಆಗಿಹೋಗಿತ್ತು.

ಆ ಹಳ್ಳಿಯಲ್ಲಿದ್ದುದು ಎರಡೇ ಮನೆ. ಒಂದು ಗುಡಿಸಲು. ಅದರ ತಟ್ಟೆ ಬಾಗಿಲಿಗೆ ಬೀಗ ಬೇರೆ ಇದ್ದಂತಿತ್ತು. ಇನ್ನೊಂದು ತಕ್ಕಮಟ್ಟಿಗೆ ದೊಡ್ಡದೇ ಮನೆ. ಅದರ ಎದುರಿಗೆ ಗೊಬ್ಬರದ ಗುಂಡಿ. ಅದಕ್ಕೂ ಆಚೆ ಒಂದು ಕಾಲುವೆ ಇದ್ದಂತೆ ಮಸಕಾಗಿ ಕಾಣಿಸುತ್ತಿತ್ತು. ಪಕ್ಕದಲ್ಲೂ ಹಿಂದುಗಡೆಗೂ ಸೊಪ್ಪಿನ ಬೆಟ್ಟ. (ಕಿರಿದಾದ ಕಾಡು) ಸದ್ದಿಲ್ಲ, ಗದ್ದಲವಿಲ್ಲ. ಯಾವೂರೆಂದು ವಿಚಾರಿಸುವ ಎಂದರೆ ನರಪಿಳ್ಳೆಯೂ ಸುಳಿಯುತ್ತಿಲ್ಲ. ಮನೆಯಲ್ಲಿ ಯಾರಿದಾರೆ ನೋಡೋಣ ಅಂತ ಹತ್ತಿರ ಹೋದೆ. ಅಷ್ಟರಲ್ಲಿ ರಾಘು ಬಂದು ನನ್ನ ಕೈ ಹಿಡಿದು ಮಾತನಾಡಬೇಡವೆಂದು ಸಂಜ್ಞೆ ಮಾಡಿದ. ಬಾಗಿಲ ಹತ್ತಿರ ಹೋಗಿ ಅಲ್ಲಿನ ಸಂದಿನಲ್ಲಿ ಇಣಿಕಿ ನೋಡಿದ. ಸರಿ ಅಂತ ತಲೆ ಅಲ್ಲಾಡಿಸಿದಂತೆ ಕಂಡಿತು. ನಾನು ಮೆಲ್ಲಗೆ "ಏನೋ" ಎಂದೆ. "ಎಲ್ಲಾ ನಡುಮನೆಯಲ್ಲಿ ಕುಳಿತಿದ್ದಾರೆ ಕಣೊ" ಅಂದ. ಹೆದರಿ ಕಂಗಾಲಾಗಿ ಹೋಗಿದ್ದ ಪಾತಾಳಲೋಕದ ಭಟ್ಟರಿಗೆ ಇದನ್ನು ಕೇಳಿ ಜೀವ ಬಂತು! ಬಾಗಿಲ ಹತ್ತಿರ ಹೋಗಿ ತಮ್ಮ ಗೊಗ್ಗರ ದನಿಯಿಂದ "ಯಾರ್ರಾ ಒಳಗೆ? ಸ್ವಲ್ಪ ಬಾಗ್ಲು ತೆಗಿರ್ರಾ" ಅಂತ ಕೂಗಿದರು. ಉತ್ತರವಿಲ್ಲ. ಮತ್ತೆ ಅಯ್ಯಾ ಸ್ವಲ್ಪ ಬಾಗಿಲು ತೆಗೀರಯ್ಯಾ ಅಂತ ಗಟ್ಟಿಯಾಗಿ ಒದರಿದರು, ಬಾಗಿಲು ಬಡಿದರು. ತಿರುಗಿ ನೋಡಿದರೆ ಕಿಂಡಿಯಿಂದ ದೀಪದ ಕಿರಣವೂ ಕಾಣಿಸದು. ಭಟ್ಟರ ಗೊಗ್ಗರ ದನಿಗೇಳಿ ಮನೆಯವರು ಹೆದರಿದರೆಂತ ಕಾಣುತ್ತದೆ. "ಬನ್ರೋ ಎಲ್ಲಾ ಸೇರಿ ಬಾಗಿಲು ಒಡೆದುಬಿಡೋಣ" ಎಂದೆ ನಾನು. ಐದು ಜನವಲ್ಲ ಐವತ್ತು ಜನರು ನಮ್ಮೊಡನೆ ಇದ್ದರೂ ಬಾಗಿಲೊಡೆವ ಧೈರ್ಯ ನಮಗಿರಲಿಲ್ಲ.

ರಾಘು "ಬನ್ರೋ ಒಂದಿಷ್ಟು ತಿಂಡಿ ತಿನ್ನೋಣ ಹಸಿವಾಗಿದೆ" ಅಂತ ಹಾಯಾಗಿ ಮನೆಯ ಮುಂಡೆಜಗುಲಿ ಮೇಲೆ ಕುಳಿತ. ಮೊದಲೆ ತಿರುಗಿತಿರುಗಿ ಸಾಕಾಗಿ ಹೋಗಿದೆ. ಯಾವ ಕಡೆ ಬಂದಿದೇವೆ ಎಂಬುದರ ಅರಿವಿಲ್ಲದೆ ಸ್ವಲ್ಪ ಇದಾಗಿ ಹೋಗಿದೆ. ಇಂಥಾ ಸಮಯದಲ್ಲಿ

ತಿಂಡಿ ಯಾರಿಗೆ ಬೇಕು. ಆದರೂ ಹೊಟ್ಟೆಯ ಕರೆಗಿಂತಲೂ ನಾಲಿಗೆ ನೀರು ಸುರಿಸಿದ್ದರಿಂದ ಎಲ್ಲರೂ ಜಗಲಿಯಮೇಲೆ ಕುಳಿತೆವು.

ರಾಘು ಅವಲಕ್ಕಿ ಗಂಟು ಬಿಚ್ಚಿದ. ಆದರಲ್ಲಿ ಸ್ವಲ್ಪ ಪಾತಾಳ ಲೋಕದವನಿಗೂ ಕೊಟ್ಟ. ಜೊತೆಗೆ ಸ್ವಲ್ಪ ಹೆಚ್ಚು ಚಟ್ನಿ ಕೊಟ್ಟಂತೆ ಕಂಡಿತು. ಯಾಕೆಂದರೆ ಭಟ್ಟರು ಬಾಯಲ್ಲಿ ಮೂಗಲ್ಲಿ ಕಣ್ಣಲ್ಲಿ ನೀರು ಸುರಿಸುತ್ತಾ "ಅವಲಕ್ಕಿ ಭಾಳ ಮೆಣಸಾಯ್ತದ" ಅಂತ ಉಸಿರ್ಗರೆದರು. ಮೊದಲೇ ಕತ್ತಲು. ಅತ್ತರೂ ತಿಳಿಯೋಹಾಗಿಲ್ಲ. ಯಾಕೆಂದರೆ ಭಟ್ಟರು ಕಾರ ತಿನ್ನುವುದು ಕಡಿಮೆ. ಅಂತಹವರು ಬರೀ ಮೆಣಸಿನ ಕಾಯಿ ಚಟ್ನಿ—ಮಹಾರಾಯ ರಾಘು ಅವನಿಗೆ ಮೆಣಸಿನಕಾಯಿ ಖಾರವೇ ಅಲ್ಲ—ತಿಂದರೆ ಅವರ ಗತಿ ಏನಾಗಬೇಕು? ನನಗೂ ಸ್ವಲ್ಪ ಖಾರವೇ ಆಯಿತು. ಖಾರ ಅಂತ ಹೇಳಲು ಹೆಮ್ಮೆಗೆ ಕಡಿಮೆ. ಅದಕ್ಕೆ "ಏನ್ರೊ ಬರೀ ಒಣ ಅವಲಕ್ಕಿ ತಿಂದಿದ್ದು. ನೀರ ಇಲ್ವಲ್ರೊ" ಎಂದೆ. "ಅಲ್ಲಿ ಕಾದಿಗೆ ಇದ್ದ ಹಾಂಗೆ ಕಾಣ್ತು" ನೋಡು ಅಂದ ಶೀನಿ. ರಾಘು ಮೆಲ್ಲನೆ ಎದ್ದು ಕತ್ತಲಲ್ಲೆ ಅಲ್ಲಿ ಇಲ್ಲಿ ಸುತ್ತಿನೋಡಿ "ಇಲ್ಲಿಲ್ಲೂ ದಾರೀನೇ ಇಲ್ಲ. ಗೊಬ್ಬರ ಗುಂಡಿ ಇಳಿದೇ ಹೋಗಬೇಕು ಅಂತ ಕಾಣುತ್ತೆ" ಅಂತ ಹೇಳಿದವನೇ ನಿಲ್ಲದೆ ಅಲ್ಲಿಗೆ ಹೊರಟೂಬಿಟ್ಟ. "ಮೆತ್ತಗೆ ಇಳೀರ್ರಾ ಹೆಗಡೇರೆ" ಪಾತಾಳಲೋಕದವನು ಎಚ್ಚರಿಕೆ ಕೊಟ್ಟ. 'ಥೂ' ಎಂದ ರಾಘು. ಅವನ ಸ್ವರ ಕೇಳಿ ನಾವೆಲ್ಲಾ ಏನೋ ಎಂದೆವು "ಇಲ್ಲ ಬಾರಪ್ಪ ಸ್ವಲ್ಪ" ಅಂದ. ಅಲ್ಹೋಗಿ ನೋಡಿದರೆ ಪಾಪ ಸೊಂಟದುದ್ದ ಕೊಚ್ಚೆಯಲ್ಲಿ ಹೂತುಹೋಗಿದ್ದಾನೆ. ಅವನನ್ನ ಅಲ್ಲಿಂದ ಎತ್ತಿ ಹೊರಗೆ ತರೋದು ಅಂದ್ರೆ ಅವರಪ್ಪ ಶಾಮಣ್ಣನವರಿಂದ ಒಂದು ಚಿಮುಟ ನಸ್ಯ ತರುವಷ್ಟು ಕಷ್ಟವಾಯಿತು. ಹಾಗೂ ಹೀಗೂ ಒದ್ದಾಡಿ ಕಾಲುವೆಯಲ್ಲಿ ನೀರಿಲ್ಲಾ ಅಂತ ಗೊತ್ತು ಮಾಡಿದೆವು! ಇನ್ನೇನು ಗತಿ! ರಾಘು ಮೈ ಕೈ ಎಲ್ಲಾ ಕೊಚ್ಚೆ. ನಮಗೆ ಬೇರೆ ಒಣ ಅವಲಕ್ಕಿ ತಿಂದು ಬಾಯಾರಿದೆ. ಏನ್ಮಾಡ್ಲಿಕ್ಕೂ

ತೋಚದೆ ಕೆಲಕಾಲ ಸುಮ್ಮನೆ ಕುಳಿತುಬಿಟ್ಟೆವು. ಅಷ್ಟರಲ್ಲಿ ಪಾತಾಳ ಲೋಕದವರು ಎದ್ದರು. ರಾಘು ಹೇಳಿದ "ಏ ಭಟ್ಟಾ, ನಾನೊಬ್ಬನೆ ಸಾಕಾಗಿತ್ತು; ವಾಸನೆ ಹರಡಲು ನೀ ಬೇರೆ ಹೊರಟ್ಯೋ. ಅಲ್ಲೆಲ್ಲಾದ್ರೂ ಕಿರುಬ, ಹುಲಿ ಇದ್ದೀತಯ್ಯಾ. ನಿನಗ್ಯಾಕೆ ಬೇಕು ಬಡ ಎತ್ತಿಗೆ ದರೇಮ್ಯಾಲಿನ ಹುಲ್ಲು" ಎಂದ. ಭಟ್ಟರು ಹೋಗಿ ಕಾಲು ಗಂಟೆ ವರೆಗೆ ಸದ್ದಿಲ್ಲ ಆಮೇಲೆ "ಎಲ್ಲೂ ನೀರೇ ಇಲ್ರಾ" ಅಂತ ಬಂದರು. "ಬಹಳ ಹೊಸ ಸಿದ್ಧಾಂತ ತಂದೆ" ಎಂದ ಶೀನಿ. ಅಷ್ಟರಲ್ಲಿ ನಾವು ಕುಳಿತಿದ್ದ ಜಗುಲಿಯ ಪಕ್ಕದಲ್ಲಿದ್ದ ಕೊಟ್ಟಿಗೆಯಿಂದ ದನಕರುಗಳು ಕೂಗಲು ಮೊದಲು ಮಾಡಿದುವು.

ಒಂದು ಸಲ; ಎರಡು ಸಲ; ಜತೆಗೆ ಒಂದು ಎಮ್ಮೆ, ನಾಲ್ಕು ಕರುಗಳು. ರಾಮ ರಾಮ. ಅಷ್ಟೂ ಸಾಯುವ ಹಾಗೆ ಕೂಗಲು ತೊಡಗಿದರೆ ಹೇಗಿರಬೇಕು. "ಎಲ್ಲೋ ಹುಲಿ ವಾಸನೆ ಬಂದಿರಬೇಕ್ರೋ" ಎಂದೆ ನಾನು. "ನನಗೇನೂ ಅದು ಮಾಡೋಲ್ಲ. ಒಂದೆಮ್ಮೇನೋ ಕರೂನೋ ಹೊತ್ತುಕೊಂಡು ಸುಲಭವಾಗಿ ಸರಾಗ ವಾಗಿ ಸದ್ದಿಲ್ಲದೆ ಹೋಗುತ್ತೆ. ಆದರೂ, ಆದರೂ ಹುಲಿಯಪ್ಪ!" ದನಕರುಗಳು ಎಡೆಬಿಡದೆ ಸಪ್ತಸ್ವರಗಳಲ್ಲೂ ಕೂಗತೊಡಗಿದುವು. ಮನೆಯ ಒಳಗಡೆ ದೀಪ ಹಚ್ಚಿದಂತೆ ಕಂಡುಬಂತು. ಬಾಗಿಲ ಸಂದಿಯಲ್ಲಿ ತೂರಿ ಆ ದೀಪದ ಕಿರಿಬೆಳಕು ಹೊರಗೆ ಬಂತು. ಭಟ್ಟರು ಬಾಗಿಲ ಹತ್ತಿರ ಹೋಗಿ "ಇಕೋ ನೋಡ್ಕಳಿ ಮಂತ್ರ ಮಾಡಿದ್ದಿ. ನಿಂಗ ಬಾಗ್ಲು ತೆಗೀದಿದ್ರೆ ದನಕರುಗೋ ಎಲ್ಲಾ ಸತ್ತ್ಹೋಗ್ತ" ಭಟ್ಟರು ಕೂಗಿದರು "ನಿಂಗ್ಳೂ ಜ್ಹತೀಗೆ. . . ."

ಸಾಯುವ ದನಕರುಗಳ ಜತೆಗೆ ಮನೆಯುವರನ್ನೂ ಸೇರಿಸಿದರು ಭಟ್ಟರು! ಎರಡು ನಿಮಿಷ. "ನೀವಾರು ಸ್ವಾಮಿ" ಒಳಗಿಂದ ಪ್ರಶ್ನೆ. "ಬಾಗಿಲು ತೆಗಿ ಆಮೇಲೆ ಹೇಳ್ತೀವೆ" ರಾಘು ಅಪ್ಪಣೆ ಮಾಡಿದ. ಅಂತೂ ಅನುಮಾನಿಸುತ್ತ ಬಾಗಿಲು ತೆಗೆದ ಮನೆಯ

ಯಜಮಾನ. "ಮುಂಡಾಮುಚ್ಚಾಕೆ! ದೊಡ್ಡ ಯಜ್ಞ ಮಾಡ್ದಂಗೆ ಆತಲ್ರ ಒಂದು ಬಾಗ್ಲು ತೆಗ್ಸಾದು" ಅಂದರು ಭಟ್ಟರು. ಮನೆಯ ಯಜಮಾನ ಬೇಡಿಕೊಂಡ "ಸ್ವಾಮಿ, ನೀವಾರೋ ತಿಳಿಯದು. ನಮ್ಮ ದನಕರುಗಳು ಸಾಯ್ತಾವೆ ಬದುಕಿಸಿರಿ."

"ಒಳ್ಳೆ ಮಾತಿಂದ ಬಾಗಲು ತೆಗೆದಿದ್ರೆ, ಇಷ್ಟೆಲ್ಲಾ ಇತ್ತಾ? ಮಂತ್ರ ತೆಗೆಯಲಿ ಸ್ನಾನ ಮಾಡವು. ಭಾವಿ ಬಚ್ಚಲು ಎಲ್ಲಿದ್ದು" ಭಟ್ಟರು ದರ್ಪದಿಂದಲೇ ಕೇಳಿದರು. ಆ ಮನೆಯವನು ಇವರನ್ನು ಸ್ನಾನ ಮಾಡಿಸಲು ಭಾವಿ ಹತ್ತಿರ ಕರೆದುಕೊಂಡು ಹೋದ. ಅಲ್ಲಿ ಸ್ನಾನ ಮಾಡಿದವನು ಲಾಘು. ಭಟ್ಟರು ಹೊರಕ್ಕೆ ಬಂದು "ಒಳಗೆ ಹೋಗಿ ಸ್ವಲ್ಪ ಬೆಣ್ಣೆ, ವಿಭೂತಿ ತಗೊಂಬಾ" ಅಂದರು. ಆ ಪರದೇಶಿ ಬ್ರಾಹ್ಮಣನಲ್ಲ—ವಿಭೂತಿ ಎಲ್ಲಿಂದ ತರಬೇಕು. ಅದೇನೋ "ಅಭಾವೇ ಶಾಲಿ ಚೂರ್ಣಂಚ" ಅಂತ ಉದಾಹರಣೆ ಹೇಳಿಕೊಂಡು ಭಟ್ಟರು ಬರಿ ಬೂದಿ ತರಿಸಿ ಬೆಣ್ಣೆಯಲ್ಲಿ ಕಲೆಸಿ ಮಂತ್ರಮಾಡಿ ಆ ಮನೆಯವನ ಕೈಗೆ ಕೊಟ್ಟು, "ಇದಕ್ಕೆ ಇನ್ನಷ್ಟು ಬೆಣ್ಣೆ ಹಾಕಿ ಕಲ್ಸಿ ಕೂಗೋದನಗೋಕೆಲ್ಲಾ ಕಣ್ಗೆ ಸೊಲ್ಪ ನಾಲಿಗ್ಗೆ ಸೊಲ್ಪ ಹಾಕಿ ತಿಕ್ಕು" ಅಂದರು.

ಅವನು ಕೊಟ್ಟಿಗೆಗೆ ಹೋಗಿ ಹಾಗೇ ಮಾಡಿ ಬಂದು ನಮ್ಮನ್ನು ಯಾವೂರವರು ಅಂತ ವಿಚಾರಿಸಿದ. ನಾವೂ ಯಾವೂರಿಗೆ ಬಂದಿದೇವೆ ಕೆಳದಿಗೆ ಹೋಗಲು ದಾರಿ ಇದೆಯೆ ಅಂತ ವಿಚಾರಿಸಿ ನಮ್ಮ ಮಾತು ಕತೆ ಮುಗಿಯುವ ಹೊತ್ತಿಗೆ ದನಕರುಗಳು ಕೂಗುವುದನ್ನ ನಿಲ್ಲಿಸಿದುವು. ಭಟ್ಟರ ಮಂತ್ರ ಪ್ರಭಾವವನ್ನು ನೋಡಿ (ನಾವೂ ಬೆರಗಾದವರೇ!) ಆ ಮನೆಯವನು ಭಯಭಕ್ತಿಯಿಂದ ನಮ್ಮನ್ನು ಆದರಿಸಿ ಕುಡಿಯಲು ಹಾಲು ಕೊಟ್ಟು ಉಪಚರಿಸಿದನು.

ನಾವು ಕೆಳದಿಗೆ ಹೋಗಲೇಬೇಕೆಂದುದರಿಂದ ನಮಗೆ ಅಷ್ಟು ದೂರ ಹಾದಿ ತೋರಿಸಿ ಬೆಳಕಿಗೆಂದು ಒಂದು ದೊಂದಿ ಮಾಡಿಕೊಟ್ಟು

ಕಳುಹಿಸಿದನು. ಇಷ್ಟೆಲ್ಲಾ ನಡೆವ ಹೊತ್ತಿಗೆ ರಾತ್ರಿ ಎರಡು ಗಂಟೆಯಾಗಿತ್ತು. ನಮಗೆಲ್ಲ ದನಕರುಗಳು ಏಕೆ ಕೂಗಿಕೊಂಡವು ಎಂಬುದನ್ನು ತಿಳಿದುಕೊಳ್ಳುವ ಕುತೂಹಲ. ಭಟ್ಟರನ್ನ ಕೇಳಿದೆವು. ರಾಘುವಿಗೆ ಇಷ್ಟು ಹೊತ್ತು ಭಟ್ಟನಾಗಿದ್ದವನು ಈಗ ಭಟ್ಟರಾದರು. "ಅದೇನ್ರಾ ಮಹಾ! ಅದೊಂದು ಬರೀ ಮೆಣಸಿನ ಕಾಯಿ ಮಂತ್ರ" ಅಂದರು. ನಮಗೆ ಅರ್ಥವಾಗಲಿಲ್ಲ. ಪುನಃ ಕೊಟ್ಟಿಗೆಯ ಕಡೆ ತಾವು ಅಡ್ಡಾಡಲು ಹೋದಾಗ ಕೊಟ್ಟಿಗೆಯ ಬಾಗಿಲು ತಡಿಕೆ ಬಾಗಿಲಂತೆ ಕಂಡದ್ದರಿಂದ ಅದನ್ನು ಮುಟ್ಟಿನೋಡಿ ನಿಶ್ಚಯ ಮಾಡಿಕೊಂಡು ಅದನ್ನು ಸ್ವಲ್ಪ ಪ್ರಯತ್ನದಿಂದ ತೆಗೆದು ಕೊಟ್ಟಿಗೆಗೆ ಹೋಗಿ ಬಾಗಿಲಿದ್ದ ಎರಡು ಮೂರು ದನಕರುಗಳಿಗೆ ಕಣ್ಣಿಗೆ ಮೂಗಿಗೆ ಬಾಯಿಗೆ ರಾಘುವಿನ ಮೆಣಸಿನಕಾಯಿ ಚಿಟ್ಟಿ ತಿಕ್ಕಿದರಂತೆ. ಅವು ಉರಿ ಹತ್ತಿ ಕೂಗತೊಡಗಿದುವು. ಅವು ಕೂಗುವುದನ್ನು ಕೇಳಿ ಉಳಿದುವೂ ಕೂಗಿದುವು ಅಂತ ವಿಶದವಾಗಿ ಹೇಳಿದರು. ಪಾತಾಳಲೋಕದ ಭಟ್ಟರ ತಂತ್ರದಿಂದ ನಮಗೆಲ್ಲಾ ರಾತ್ರಿ ಕ್ಷೀರಪಾನವಾಯಿತು.

ಅಂತೂ ಹೊಸದಾರಿಯಾದ್ದರಿಂದ ಎಡವುತ್ತಾ ತಡವುತ್ತಾ ಕೆಳದಿಗೆ ಬರುವವೇಳೆಗೆ ಬೆಳಗಿನಜಾವ ಐದುಗಂಟೆಯಾಗಿತ್ತು. ತೇರು ನೆಲೆ ನಿಂತು ಹೋಗಿತ್ತು! ಹೀಗಾಯಿತು ನಾವು ಮಾಡಿದ ಜಾತ್ರೆ!!

• • • • • •

---

ನಿಕ್ಕಿ–ನಿಶ್ಚಯ. ಆಪ್ಪೇ–ಮೊಗೂ. ಚಾಲೀಬಾಲ–ಚೌರೀ ಮೃಗದ ಕೂದಲು. ಗಿಣಲು–ಸಣ್ಣ ಹಿತ್ತಾಳೆ ಹಣತೆ. ಕಾದಿಗೆ–ಕಾಲುವೆ. ಮೆಣಸಾಗಿದೆ–ಖಾರವಾಗಿದೆ. ಚಮುಟ–ಚಿಟಗಾ. ದರೆ–ಬೆಟ್ಟದ ಅಂಚು. ಬಾವಿಬಚ್ಚಲು–ಭಾವಿ ಸ್ನಾನದ ಮನೆ.

# ಶ್ರಾದ್ಧಾನ್ವೇಷಣ

ಶ್ರಾದ್ಧಾನ್ವೇಷಣ ಎಂಬ ಪದವನ್ನು ಮೊದಲು ಹೇಳಿದವರು ಪುರೋಹಿತ ನೈವೇದ್ಯದ ನರಸಿಂಹಭಟ್ಟರು! ಮೊಗದೂರು ಮತ್ತು ಅವರ ಅಕ್ಕಪಕ್ಕದ ಹಳ್ಳಿಗಳು ನರಸಿಂಹಭಟ್ಟರ ಸರ್ಥಿಗೆ ಸೇರಿದ್ದು. ಅವರಾದರೂ ಅಡಿಕೆ ಸುಗ್ಗಿ ಶುರುವಾಗುವುದರೊಳಗಾಗಿಯೇ ಘಟ್ಟ ಹತ್ತಿ ಬರುವರು. ಸರ್ಥಿ ಎತ್ತುವ ಮೊದಲು ಯಾರಾರ ಮನೆಯಲ್ಲಿ ಎಷ್ಟೆಷ್ಟು ಅಡಿಕೆ ಬೆಳದಿದೆ ಎಂಬುದರ ಸೆನ್ಸಸ್ಸು ಅವರಿಂದ ಆಗಬೇಕು. "ಹ್ಯಾಂಗ್ರಾ ಭಟ್ರೆ ಈ ಸರ್ತಿಯ ಸರ್ಥಿ?" ಎಂತ ಕೇಳಿದರೆ "ಎಂಥಾ ಹೇಳಾದ್ರಾ! ಬೆಳೆಯಾಪ್ರಾ ಕೊಡಾರ ಕೈ ಬರವಲ್ರಾ, ಕೊಡೋ ಕೈ ಗುಡ್ಡಾಗೋಯ್ದು" ಎಂತ ಉತ್ತರ ಬರುತ್ತದೆ. ಸ್ಟಿರಿಯೋ ಟೈಪ್ಡ್ ಉತ್ತರ ಅದು!

ಎಂದಿನಂತೆ ಈ ವರ್ಷವೂ ಭಟ್ಟರು ಅಡಿಕೆ ಹೀಚೊಡೆಯುವುದರೊಳಗಾಗಿಯೇ ಬಂದಿದ್ದರು. ಅದರ ಕಾರಣ ನನಗೆ ಗೊತ್ತಿತ್ತು ಅನ್ನಿ. ನಮ್ಮ ಮನೆಯಲ್ಲಿ ಶ್ರಾವಣ ಮಾಸದಲ್ಲಿ ಪ್ರತಿದಿನ ದೇವರಿಗೆ ರುದ್ರಾಭಿಷೇಕ, ಪೂಜೆ, ಮಂಗಳಾರತಿ, ಸಮಾರಾಧನೆ ನಡೆಸುವ ಪದ್ಧತಿ. ಈ ಪೂಜೆ ಗುತ್ತಿಗೆ ಹೇಗೂ ಹಿಡಿದುಕೊಂಡರೆ ಒಂದು ತಿಂಗಳು ಕಳೆಯುತ್ತದೆ. ಆಮೇಲೆ ಇದ್ದೇ ಇದೆ. ನಾಲ್ಕು ದಿನ ತಡೆದರೆ ವಿನಾಯಕನ ಚತುರ್ಥಿ, ಅನಂತರ ಎಳೆ ಅಷ್ಟಮಿ ಹೀಗೆ ಹಬ್ಬಗಳ ಸಾಲು ಸಾಲು! ಕೆಲವು ಮನೆಯಲ್ಲಂತೂ ಭರ್ಜರಿಯಾಗಿ "ಮಾಲು" ಕಟ್ಟಿ ಗಣಪತಿ ಕುಳ್ಳಿರಿಸುತ್ತಾರೆ. ಅಂಥವರು ಹನ್ನೆರಡು ದಿನಗಳಾದರೂ ಗಣಪತಿ ಬಿಡುವುದಿಲ್ಲ. ಮನೆಯಲ್ಲಿ ಗಣಪತಿ ಇದ್ದಮೇಲೆ ದಿನಕ್ಕೊಂದು ಭಕ್ಷ್ಯ ಮಾಡಲೇಬೇಕಲ್ಲ! ಭಟ್ಟರು ಇವನ್ನೆಲ್ಲಾ ಲೆಖ್ಖ ಹಾಕಿಕೊಂಡು ದಿನಕ್ಕೊಂದು ಮನೆಯಲ್ಲಿ ಕಡುಬಿನ

ಊಟ ಗಿಟ್ಟಿಸುತ್ತಿದ್ದರು. ವೈದೀಕರು; ಮೇಲಾಗಿ ಪುರೋಹಿತರು. ಭಟ್ಟರನ್ನು ಕರೆಯದೆ ಬಿಡಲು ಆಗುತ್ತದೆಯೇ? ಭಾದ್ರಪದ ಮಾಸ ಹೀಗೆ ಮುಗಿಯಿತು. ಅಂದರೆ ಅನಂತರ ಅನಂತನ ಚತುರ್ದಶಿ, ಆಮೇಲೆ ನವರಾತ್ರಿ ಇವೆಲ್ಲಾ ಬರುತ್ತವೆ. ಇವುಗಳನ್ನೆಲ್ಲ ಮುಗಿಸುವ ಹೊತ್ತಿಗೆ ಅಡಿಕೆ ಕೊಯ್ಲು ಬರುತ್ತದೆ. ಹೀಗೆ ಇದ್ದ ಬಿದ್ದ ಹಬ್ಬದಲ್ಲಿ ಬಂದ ದಕ್ಷಿಣೆಯನ್ನೆಲ್ಲಾ ಗಂಟುಕಟ್ಟಿಕೊಂಡು, ಅಡಿಕೆ ಸರ್ಫ ಎತ್ತಿ ಆದನ್ನು ಮಾರಿ ಬಂದ ಹಣವನ್ನು ಕಟ್ಟಿಕೊಂಡು ಪಾತಾಳಲೋಕಕ್ಕೆ ಗಮನಮಾಡಿದರೆ ಒಂದು ವರ್ಷದ ದುಡಿಮೆ ಮಾಡಿದ ಹಾಗಾಯಿತು ಭಟ್ಟರಿಗೆ!

ಈ ಸಾರಿ ನರಸಿಂಹಭಟ್ಟರು ಬಂದಾಗಲೇ ಈ "ಶ್ರಾದ್ಧಾನ್ವೇಷಣ" ಎಂಬ ಪದ ಬಂದುದು! ಅದು ಆದದ್ದಾದರೂ ಹೀಗೆ. ತಪ್ಪು ಯಾರದ್ದೂ ಇಲ್ಲ ಅನ್ನಿ. ಶ್ರಾವಣಮಾಸದ ಒಂದು ದಿನ. ಮಳೆ ಧೋರೆಂದು ಸುರಿಯುತ್ತಿತ್ತು. ಈ ದಿನಗಳ ಬೆಳಗಿನಲ್ಲಿ ನಮ್ಮಲ್ಲಿ ಕಾಗೆ ಕೂಡ ಕೂಗುವುದಿಲ್ಲ! ಊರಿಂದ ಊರಿಗೆ ನೀರಿನ ಸಂಬಂಧವೇ ವಿನಹ ಬೇರೆ ಸಂಬಂಧವಿರುವುದಿಲ್ಲ. ಜನ ದನಗಳು ಮನೆಯನ್ನು ಬಿಟ್ಟು ಹೊರಡುವ ಮಾತೇ ಇಲ್ಲ. ಹೀಗಿರುವಾಗ, ಮೊಗದೂರಿನ ಕಡೇ ಮನೆ ಕೃಷ್ಣಪ್ಪ ಬೆಳಗ್ಗೆ ಅಷ್ಟು ಹೊತ್ತಿಗೇ ನಮ್ಮ ಮನೆಗೆ ಬಂದುದನ್ನು ನೋಡಿ ನನಗೆ ಆಶ್ಚರ್ಯವಾಗುವುದರಲ್ಲಿ ಹೆಚ್ಚೇನಿದೆ? "ಏನಾ ಕೃಷ್ಣಪ್ಪ ಇಷ್ಟು ಮುಂಚೆ ಬಂದ್ಬಿಟಿದೆ" ಎಂತ ನಾನು ಕೇಳಿದ್ದಕ್ಕೆ ಅವನು "ಗಿರಿ, ಎಮ್ಮಪ್ಪೈಂದು ತಿತಿ ನಾಳಾಗೆ, ನರಸಿಂಹಭಟ್ರಿಗೆ ಬರಕ್ಹೇಳ್ಬಿಡಾ" ಅಂತ ಹೇಳಿ ಹೊರಟೇಹೋದ. ನಾನಾದರೂ ಅದರ ಬಗ್ಗೆ ಹೆಚ್ಚಿನ ವಿಮರ್ಶೆ ಮಾಡದೆ ಭಟ್ಟರ ಹತ್ತಿರ "ಭಟ್ರೇ ತಿತಿ ಊಟಕ್ಕೆ ಕರೆ ಬೈಂದಲ್ರಾ ನಿಂಗಕ್ಕೆ. ಕಡೇ ಮನೆ ಕೃಷ್ಣಪ್ಪನ ಮನೆಯಲ್ಲಿ ನಾಳಾಗೆ ತಿತಿಯಡ" ಎಂದೆ. ಅವರು "ಸೈಯಾ! ಬೆಳಗ್ಮುಂಚೆ ಸ್ನಾನ ಮುಗಸ್ಕಂಡು ಹೋಗ್ತೆನ್ರಾ" ಎಂದರು.

ಮೂರನೆಯ ದಿನ ಬೆಳಗ್ಗೆ ಎಂಟುಗಂಟೆಯೊಳಗಾಗಿಯೇ ನಮ್ಮ ಮನೆಯ ಪೂಜೆಯನ್ನು ಮುಗಿಸಿ ಹೊರಟುಹೋದರು ಭಟ್ಟರು. ನಮ್ಮೂರಿಂದ ಮೊಗದೂರಿಗೆ ದೂರವೇ ಇಲ್ಲ. ಒಂದು ಒಳಬೇಲಿ, ಆದರ ಆಚೆ ಸೊಪ್ಪಿನ ಬೆಟ್ಟ ದಾಟಿ ಆಮೇಲೊಂದು ಗುಡ್ಡ ಹತ್ತಿಳಿದು, ಹತ್ತಿರ ಕಾಣುವ ಗದ್ದೆಯನ್ನು ದಾಟಿದರೆ ಬರುವುದೇ ಮೊಗದೂರು. ನಮ್ಮ ಲೆಖ್ಖದಲ್ಲೆಲ್ಲಾ ಅದು ಸುಮಾರು ಎರಡು ಮೈಲಿ. ಅದೇ ಕಸಬ ಹೋಬಳಿ ಸೇಕದಾರರು ಬಂದರೆ "ಅರೆ, ನಿಮ್ಗೆ ಏನ್ಲೆಕ್ಕ ಗೊತ್ತಯ್ಯ. ಇಲ್ಲಿಂದ ಅಲ್ಗೆ ಐದುಮೈಲಿಯಾಗುತ್ತೆ" ಅಂತ ನಮಗೆ ಕಛೇರಿ ಲೆಖ್ಖ ಕಲಿಸುತ್ತಾರೆ. ನಮ್ಮೂರ ತಳವಾರ ಬೀರನನ್ನು ಕೇಳಿದರೆ ಒಂದ್ಮೈಲಿ ಎಲ್ಡು ಫರ್ಲಾಂಗ್ ಅಂತ ರಾಗ ಎಳೀತಾನೆ. ನೀವೇ ಬಂದು ನೋಡಿ ಇದರ ನಿರ್ಣಯ ಮಾಡಬೇಕಷ್ಟೆ! ಇಷ್ಟು ಹತ್ತಿರವಿದ್ದುದರಿಂದ ಭಟ್ಟರು ಊಟ ಮಾಡಿ ಸಂಜೆಯೇ ಮನೆಗೆ ಹಿಂದಿರುಗಿಯಾರೆಂದು ನಾನು ಅಂದುಕೊಂಡಿದ್ದೆ. ಆದರೆ ರಾತ್ರಿ ಅವರು ಬರಲಿಲ್ಲ. ಮಳೆ ಜಾಸ್ತಿಯಾದುದರಿಂದ ಬರಲಿಲ್ಲವೇನೋ ಅಂದುಕೊಂಡೆ. ಮಾರನೆ ದಿನ ನಾನು ಎದ್ದು ಬರುವುದರೊಳಗಾಗಿಯೇ ಭಟ್ಟರು ಭವಂತಿಯಲ್ಲಿ ಕುಳಿತು ಗಂಧ ತೇಯುತ್ತಿದ್ದರು. ನಾನು ಮುಖ ತೊಳೆದುಕೊಂಡು ಬಂದು, "ಏನ್ರಾ ಭಟ್ರೆ, ರಾತ್ರಿ ಬಕ್ಕ ಅಂತೆ ಮಾಡಿದ್ದಿ ಆನು" ಎಂದೆ. ಅವರು "ಅಯ್ಯೋ ಮಾರಾಯ್ರ! ಅದೇನ್ಹೇಳಾದ್ರ! ನಿನ್ನೆ ದೊಡ್ಡ ಶ್ರಾದ್ಧಾನ್ವೇಷಣ ಆಗ್ಹೋತು" ಅಂತ ನಿಟ್ಟುಸಿರು ಬಿಟ್ಟರು. ಶ್ರಾದ್ಧಾನ್ವೇಷಣ ಅಂತ ಹೇಳಿನೊಡನೆ ನನಗೆ ಆಶ್ಚರ್ಯವಾಯಿತು. ಜತೆಗೆ ಏನಾಗಿರಬಹುದೆಂಬುದರ ತಿಳಿವೂ ಹೊಳೆಯಿತು.

ತಿತಿಗೆ ಹೋಗುವ ಅವಸರದಲ್ಲಿ ಭಟ್ಟರು ಯಾವೂರ ಕಡೇಮನೆ ಕೃಷ್ಣಪ್ಪ ಎಂತ ಕೇಳಿ ತಿಳಿದುಕೊಂಡಿರಲಿಲ್ಲ. ನಾನಾದರೂ ಹೇಳುವ ಗೋಜಿಗೆ ಹೋಗಿರಲಲ್ಲ. ಹೇಳಬಾರದವಂತಲ್ಲ, ಅದೊಂದು ತರಹದ ಮರೆವು! ನಮ್ಮ ಮಲೆನಾಡಿನ ಹಳ್ಳಿಗಾಡಿನ ಕಡೆ, ಕಡೇಮನೆ,

ಮೇಲಿನ ಮನೆ, ಕೆಳಗಿನ ಮನೆ, ಗದ್ದೇಮನೆ ಎಂತೆಲ್ಲಾ ಉಂಟು. ಅದರ ಅರ್ಥವಿಷ್ಟೇ! ಒಂದು ಕೇರಿಯಲ್ಲಿ ಯಾವುದಾದರೊಂದು ಕಡೆಯಿಂದ ಮನೆಗಳನ್ನು ಎಣಿಸಬೇಕಲ್ಲ; ಹಾಗೆ ಮಾಮೂಲಾಗಿ ಯಾವಕಡೆಯಿಂದ ಮನೆಗಳನ್ನು ಎಣಿಸುತ್ತಾರೋ ಆ ಮೊದಲನೇ ಮನೆಗೆ ಮೊದಲನೇ ಮನೆ ಎಂತಲೂ ಕೊನೆಯ ಮನೆಗೆ ಕೆಳಗಿನ ಮನೆ ಎಂತಲೂ ಹೇಳುತ್ತಾರೆ. ಗದ್ದೆ, ತೋಟಗಳ ಹತ್ತಿರ ಇರುವುದಕ್ಕೆ ಗದ್ದೇ ಮನೆ, ತೋಟದ ಮನೆ, ಮೇಲಿನ ಮನೆ ಅಂತ ಇರುವುದು ಸಹಜವಷ್ಟೆ. ನಮ್ಮೂರಿಗೆ ನಾಲ್ಕು ಮೈಲಿ ದೂರದಲ್ಲಿ ಸುರಗೋಡು ಎಂತ ಊರಿದೆ. ಅಲ್ಲೂ ಕಡೇಮನೆಯಿದ್ದು ಅದರ ಯಜಮಾನನ ಹೆಸರೂ ಕೃಷ್ಣಪ್ಪ ಎಂತ! ಭಟ್ಟರು ನಮ್ಮಲ್ಲಿಂದ ಹೊರಟವರು ಸೀದಾ ಅಲ್ಲಿಗೆ ಹೋದರು. ನಮ್ಮ ಲೆಖ್ಖದ ನಾಲ್ಕು ಮೈಲಿಯನ್ನು ಭಟ್ಟರು ತಮ್ಮ ಹೊಟ್ಟೆ ಮತ್ತು ಮಡಿಗಂಟುಗಳನ್ನು ಹೊತ್ತುಕೊಂಡು, ಒಂದೇ ಸಮನಾಗಿ ಸುರಿವ ಜೋನೆ ಮಳೆಯಲ್ಲಿ ಸುರಗೋಡಿಗೆ ಹೋಗುವುದರೊಳಗಾಗಿ ಹೊತ್ತು ಸತ್ತಿಯ ನೇರಕ್ಕೆ ಹೋಗಿತ್ತು.

ಹೊತ್ತಾಗಿ ಹೋಯಿತೆಂದು, ಭಟ್ಟರು ಬಳಕೆಯಾಗಿದ್ದ ಇನ್ನಾರ ಮನೆಗೂ ಹೋಗದೆ ಸೀದಾ ಕಡೇಮನೆ ಕೃಷ್ಣಪ್ಪನ ಮನೆಗೇ ಹೋದರು. ಹೊರಗೆ ಮುಂಚೇಕಡೆ ಯಾರೂ ಇರಲಿಲ್ಲ. ಹುಂ, ಒಳಗಿದ್ದಾರು ಎಂದುಕೊಂಡು ಭಟ್ಟರು, ಅಲ್ಲೇ ಹಾಕಿದ್ದ ಕಾಲುಮಣೆ ಮೇಲೆ ಕುಳಿತು ಸ್ವಲ್ಪ ಸುಧಾರಿಸಿಕೊಂಡು ನಡುಮನೆಗೆ ಹೋದರು. ಬಾಗಿಲು ಸ್ವಲ್ಪ ಓರೆ ಮಾಡಿತ್ತು. ಅದರ ಸಂದಿನಲ್ಲಿ ಭಟ್ಟರು ಒಳಗೆ ನೋಡಿದರೆ—ಒಳಗೆಲ್ಲ ಊಟಕ್ಕೆ ಕುಳಿತಿದ್ದರು! ಭಟ್ಟರ ಸಿಟ್ಟು ನೆತ್ತಿಗೆ ಏರಿಹೋಯ್ತು. "ಶ್ರಾದ್ಧದ ಊಟಕ್ಕೆ ಬ್ರಾಹ್ಮಣನನ್ನು ಆಹ್ವಾನಿಸಿ ಅವನನ್ನು ಅವಮಾನಿಸುವುದೇ; ಬ್ರಹ್ಮತೇಜಸ್ಸಿಗೆ ಬೆಲೆ ಇಲ್ಲವೆ" ಎಂದುಕೊಂಡು ಸೀದಾ ಒಳಗೆ ಹೋಗಿ "ಏನಾ ಕೃಷ್ಣಪ್ಪಾ, ತಿಥೀ ಊಟಕ್ಕೆ ಬ್ರಾಹ್ಮಣನ್ನ ಬಿಟ್ಟು ಊಟ ಮಾಡ್ತ್ಯೇನಾ,

ಪಾಪ ಬಪ್ಪಿಲ್ಯನಾ? ನಿಂಗಳ ಪಿತೃಗಳು ಉದ್ಧಾರಾಗ್ತ್ವನಾ?" ಅಂತ ಒಂದೇ ವಾಕ್ಯದಲ್ಲಿ ಕೂಗಿದರು. ಕೃಷ್ಣಪ್ಪನ ಹೆಂಡತಿ, ಸ್ವಲ್ಪ ರಾವಣನ ತಂಗಿ ತರಹೆಯವಳು. ಅವಳು "ಏನ್ರಾ ಭಟ್ರೇ ತಲೆ ಗಿಲೆ ತಿರ್ಗಿದ್ದ, ಕುಡ್ಕಂಡು ಗಿಡ್ಕಂಡು ಬೈಂದ್ರಾ; ಮಟಮಟ ಮಧ್ಯಾನ್ಹ ಡ್ಯೂತ್ತಿನಾಗೆ ತುಂಬಿಮ್ಮನೇಲಿ ತಿತಿ ಕರೆಯಕ್ಕೆ ಬೈಂದ; ಹೊರಡು ಹೊರಗೇ" ಎಂತ ಹೇಳುತ್ತ ಬಡಿಸಲು ಹಿಡಿದ ಸಾರಿನ ಸೌಟನ್ನು ಎತ್ತಿದೊಡನೆಯೇ ರಾಮಾ ಕೃಷ್ಣಾ ಎಂದು ಭಟ್ಟರು ಹೊರಗೆ ಹಾರಿದರು! ಕೃಷ್ಣಪ್ಪ ಸಾತ್ವಿಕ ಮತ್ತು ವಿವೇಕಿ ಅವನು ಅರೆ ಊಟದಲ್ಲಿ ಆಪ್ತೋಶನ ತೆಗೆದುಕೊಂಡು ಹೊರಗೆ ಬಂದು "ಎಂತ ಸಮಾಚಾರಾ ಭಟ್ರೇ" ಎಂದ. ಅವನು "ಎಂಥ ಹೇಳದ್ರಾ, ಹೆಗಡೇರು ಕಡೇಮನೆ ಕೃಷ್ಣಪ್ಪನ ಮನೇಲಿ ತಿತಿ, ನಿಂಗಕ್ಕೆ ಊಟಕ್ಕೆ ಹೇಳಿದ ಅಂತ ಹೇಳಿದ್ದ. ಅದಕ್ಕೆ ಇಲ್ಲಿಗೆ ಬಂದಿ. ಇಲ್ಲಿ ಈ ತರ. ಅವ್ರು ಹೀಂಗೆ ಸುಳ್ಳೇಳಿ ತಮಾಷಿ ಮಾಡ್ತ ಅಂತ ತಿಳ್ಕಳ್ಲಿಲ್ಲೆ" ಅಂದರು. ಆಗ ಕೃಷ್ಣಪ್ಪ "ಅಯ್ಯೋ ಭಟ್ರೆ ಯಮ್ಮನೇಲಿ ಅಲ್ದರ, ಮ್ಯಾಲಿನ ಮನೇಲಿ ಇವತ್ತು ತಿತಿ; ಅಲ್ಲಿಗ್ಹೇಳಕ್ಕು ಅಂತ ಹೇಳಿದ.

"ಸರಿಯಪ್ಪ" ಅಂತ ಹೇಳಿದ್ದೇ, ಭಟ್ಟರು ಸೀದಾ ಮೇಲಿನ ಮನೆಗೆ ಹೋದರು. ಅಲ್ಲಿ ಒಳಗೆ ಹೋದೊಡನೆಯೇ ಭಟ್ಟರಿಗೆ ಸಲ್ಪ ಹಗುರವಾಯಿತು ಮನಸ್ಸು. ಭಟ್ಟರಿಗೆಂದು ಎರಡು ಮಣೆಗಳೂ, ದೇವರಿಗೆಂದು ಒಂದು ಮಣೆಯೂ ತಯಾರಾಗಿತ್ತು. ಒಂದು ಮಣೆ ಮೇಲೆ ಒಬ್ಬ ಭಟ್ಟರು ಆಗಲೇ ಕುಳಿತಿದ್ದರು. ಯಜಮಾನನು ಪಂಚೆಯನ್ನು ಪಂಚಕಚ್ಚೆಯಾಗಿ ಉಟ್ಟು ಸೊಂಟಕ್ಕೆ ಸ್ನಾನದ ಪಂಚೆ ಬಿಗಿದು ಕಾರ್ಯಕ್ಕೆ ಅಣಿಮಾಡುತ್ತಿದ್ದನು. ಭಟ್ಟರು ಒಳಗೆ ಹೋದವರೇ "ಏನಾ ತಿಮ್ಮಪ್ಪ ಹೊತ್ತಾಗ್ಹೋತು ಅಲ್ದನಾ. ಏನ್ಮಾಡದಾ? ಹೆಗಡೇರು ಹೇಳಾದ್ರಾಗೆ ಸ್ವಲ್ಪ ಮಿಸ್ಟೇಕು ಮಾಡಿಬಿಟ್ಟ. ಅಷ್ಟೆ ಹೊತ್ತಾತ. ಇಕೊ ಬಂದ್ಬಿಟ್ಟೆ ಕಾಲ್ತೊಳಕಂಡು. ಸ್ನಾನ ಗೀನ

ಎಲ್ಲ ಆಯ್ತು" ಎಂದು ಹೇಳುತ್ತ ಮಡಿ ಉಡಲು ತಯಾರಾದರು. ಕರೆಯದೇ ಹೀಗೆ ತಾನೇ ಊಟಕ್ಕೆ ಬಂದ ಬ್ರಾಹ್ಮಣನನ್ನು ನೋಡಿ ತಿಮ್ಮಪ್ಪನಿಗೆ ಗಾಬರಿಯಾಯ್ತು. ಆದರೂ, "ಎಷ್ಟೇ ಆದರೂ ಹಿರಿಯರ ದಿನ. ಬ್ರಾಹ್ಮಣ ಕರೆಯದೆ ಬಂದಿದ್ದಾನೆ. ಪಿತೃಗಳ ಇಷ್ಟ" ಎಂದುಕೊಂಡು ಅವನು ಇನ್ನೊಂದು ಮಣೆಯನ್ನು ಇಟ್ಟನು. ಅದನ್ನು ನೋಡಿದ ಭಟ್ಟರು "ಇದೇನು ತಿಮ್ಮಪ್ಪ ಮತ್ತೊಂದ್ಮಣೆ ಇಟ್ಟೆ. ಐದ್ಜನ ಭಟ್ರೀಗೆ ಹೇಳಿದ್ಯನ? ಈ ವರ್ಷ ಅಗ್ನಿಕರಣ ಶ್ರಾದ್ಧ ಮಾಡ್ತ್ಯ್ರ ಹ್ಯಾಂಗೆ? ಆಗಲಿ. ಮಾಡಿದ್ರೆಲ್ಲಾ ಒಳ್ಳೇದೆ" ಎಂದರು. ಆಗ ತಿಮ್ಮಪ್ಪನವರು ಇದ್ದುದನ್ನು ಹೇಳಲೇಬೇಕಾಯ್ತು. ಅವರು ಭಟ್ಟರಿಗೆ ಹೇಳಲೇ ಇಲ್ಲವೆಂತಲೂ, ಬೇರೆ ಎರಡು ಜನರಿಗೆ ಹೇಳಿದ್ದರೆಂತಲೂ ತಿಳಿಸಿದರು. "ರಾಮಜ್ಜಗೆ ಹೇಳಿದ್ದಿ ಅವರು ಬೈಂದ. ಇನ್ನೊಬ್ರು ಅಂತ ಮೇಷ್ಟ್ರೀಗೆ ಹೇಳಿದ್ದಿ. ಅವರು ಈಗ ಸ್ನಾನಮಾಡಿ ಬತ್ರ. ನಿಂಗ ಹೆಂಗೂ ಬೈಂದಿ, ತಿತಿ ಮುಗ್ಸಗಂಡೇ ಹೋಗ್ಬಿಡಿ" ಎಂದು ತಿಮ್ಮಪ್ಪನವರು ಹೇಳಿದರು. ಭಟ್ಟರಿಗೆ ಒಳ್ಳೇ ಪೀಕಲಾಟಕ್ಕೇ ಬಂತು. ಯಾರ ಮನೆಯಲ್ಲಿ ತಿತಿಯಾಗಿರಬಹುದು. ಯಾರು ತನಗೆ ಆಹ್ವಾನ ಕೊಟ್ಟಿರಬಹುದು ಎಂಬುದೊಂದು ಅಗಾಧ ಪ್ರಶ್ನೆಯಾಯಿತು. ನಿಮ್ಮ ಮನೇಲಿ ಇಂದು ಶ್ರಾದ್ಧವೇ ಎಂದು ಕೇಳುತ್ತ ಮನೆ ಮನೆ ತಿರುಗಲು ಆಗುತ್ತದೆಯೇ? ತಾನು ಹೆಗಡೇರನ್ನ ಕೇಳದೆ ಬಂದುದು ಶುದ್ಧ ತಪ್ಪಾಯ್ತು ಎಂತ ಭಟ್ಟರು ಬೆಪ್ಪಾಗಿ ಕುಳಿತರು. ನಿಧಾನವಾಗಿ ತಿಮ್ಮಪ್ಪನ ಹತ್ತಿರ ನಡೆದ ಸಂಗತಿಯನ್ನೆಲ್ಲ ವಿವರಿಸಿದರು. ಕೂಡಲೇ ತಿಮ್ಮಪ್ಪ "ಓಹೋ ಭಟ್ರೆ, ಮೊಗದೂರು ಕಡೇಮನೇ ಕೃಷ್ಣಪ್ಪನ ಮನೇಲೂ ಇವತ್ತೇ ತಿತಿ. ಅವರಪ್ಪ ಯಮ್ಮಪ್ಪ ಇಬ್ಬರೂ ಒಂದೇ ದಿನ ಸತ್ತೋಯ್ದು. ಹ್ಯಾಂಗೆ ಗನಾಗಿ ನೆನಪಿದ್ರೆ. ಅವತ್ತು ಭಟ್ರು ಸಿಗ್ದೇ ಇಪರೀತ ಕಷ್ಟ ಆಗಿತ್ತು" ಎಂದು ಹೇಳಿದರು. ಭಟ್ಟರಿಗೆ ಹೋದ ಜೀವ ಪುನಃ ಬಂದಂತಾಯಿತು. ಅಷ್ಟು ಹೊತ್ತಿಗೆ ಆಗಲೇ ಒಂಭತ್ತು ತಾಸು (ಎರಡು ಗಂಟೆ) ಆಗಿತ್ತು. ಇನ್ನು ಮೇಲೆ

ಮೊಗದೂರಿಗೆ ಹೋಗಿ ತಿತಿ ಮಾಡಿಸಿ ಊಟ ಮಾಡುವುದೆಂದರೆ ರಾತ್ರಿಯಾಗುವುದೇ ಸರಿ ಎಂದುಕೊಂಡು ಭಟ್ಟರು ಕಾಲನ್ನು ಎಳೆಯುತ್ತ ಮೊಗದೂರಿಗೆ ಸಾಗಿದರು. ಭಟ್ಟರು ಅಷ್ಟು ಹೊತ್ತು ಬಾರದುದನ್ನು ನೋಡಿ ಅಲ್ಲಿನವರೆಲ್ಲ ಗಾಭರಿಯಾಗಿದ್ದರಂತೆ. ಅಂತೂ ಆ ದಿನದ ಕರ್ಮಾಂಗಗಳೆಲ್ಲ ಪೂರ್ತಿ ಆಗಿ ಊಟವಾಗುವ ಹೊತ್ತಿಗೆ ಸಂಜೆಯಾಯ್ತು. ರಾತ್ರಿ ವಿಶ್ರಮಿಸಿಕೊಂಡು ಭಟ್ಟರು ಬೆಳಿಗ್ಗೆ ನಮ್ಮೂರಿಗೆ ಬಂದರು.

ನನಗೆ ಇಷ್ಟು ವಿವರವಾಗಿ ಯೋಚಿಸಲು ಆಗಲಿಲ್ಲ. "ಏನ್ರಾ ಸುರಗೋಡು ಕೃಷ್ಣಪ್ಪನ ಮನೆಗೆ ಹೋಗಿ ಬಿಟ್ರಿ?" ಎಂದು ನಾನು ನಕ್ಕಮೇಲೆ ಅವರು ಈ ಕಥೆಯನ್ನೆಲ್ಲಾ ಹೇಳಿ "ಒಳ್ಳೆ ಶ್ರಾದ್ಧಾನ್ವೇಷಣ ಆಗ್ಹೋತು" ಅಂದರು.

• • • • • •

# ದೀಪ

ಅಂದು ಭಾನುವಾರ. ಕತ್ತಲಾಗಿದೆ. ಗಾಳಿಯು ಕಿಟಕಿಯಿಂದ ರೂಮಿನೊಳಕ್ಕೆ ಬೀಸುತ್ತಿದೆ. ದೂರದಿಂದ ತುಂಗಭದ್ರೆಯು ಸಳಸಳ ನಿನಾದವು ಕೇಳಿಬರುತ್ತಿದೆ. ಕುಮಾರನು ಈಸಿಛೇರಿನ ಮೇಲೆ ಅಚಲನಾಗಿ ಕುಳಿತಿದಾನೆ. ಮೇಜಿನ ಮೇಲೆ ದೀಪವೊಂದು ಪಳಪಳನೆ ಉರಿಯುತ್ತಿದೆ. ನೀರಿನಿಂದ ತುಂಬಿದ ಕಣ್ಣುಗಳೆರಡೂ ಮಾಳಿಗೆಯನ್ನ ನೋಡುತ್ತಿದ್ದುವು. ಕಾಲದ ಗರ್ಭದಲ್ಲಿ ಅಡಗಿ ಹೋದ ಯಾವುದೋ ನೆನಹುಗಳನ್ನು ಎಳೆದು ತರುವಂತಿದ್ದುವು ಆ ನೋಟ.

ಕುಮಾರನು ಎದ್ದನು. ನಿಧಾನವಾಗಿ ಬಂದು ಕಿಟಕಿಯ ಬಳಿ ನಿಂತುಕೊಂಡನು. ಎರಡು ಕೈಗಳಿಂದಲೂ ಎರಡು ಸರಳುಗಳನ್ನು ಹಿಡಿದುಕೊಂಡು ಮುಂದೆ ಬಾಗಿದನು. ಕಠಿಣವಾಗಿರುವ ಆ ಸರಳುಗಳು ಆವನ ಮೃದು ಕಪೋಲಗಳಿಗೆ ಮುತ್ತು ಕೊಟ್ಟುವು. ನೀರವದಿಂದ ಮತ್ತಷ್ಟು ಗಭೀರವಾದ ಆ ಕತ್ತಲನ್ನು ನೋಡಿದನು. ಮಂಕನಂತೆ ಕುರುಡನಂತೆ ದಿಟ್ಟಿಸಿ ನೋಡಿದನು. ಕಂಗಳೆರಡೂ ನೀರಿನಿಂದ ತುಂಬಿದೆ, ತುಂಬಿ ಉಕ್ಕಿದೆ. ಹನಿಹನಿಯಾಗಿ ಬಿದ್ದು ಆ ಕತ್ತಲಿನ ಮಡುವಿನಲ್ಲಿ ಬಿದ್ದು ಅಡಗಿ ಹೋಯಿತು. ತಡೆತಡೆದು ನಿಟ್ಟುಸಿರನ್ನು ಬಿಟ್ಟು ಪುನಃ ಈಸಿಛೇರಿನ ಮೇಲೆ ಬಂದು ದೊಪ್ಪನೆ ಕುಳಿತನು. ಹದಿನಾಲ್ಕು ವರುಷಗಳ ಹಿಂದಿನ ನೆನಪದು. ಅಂದೂ ಭಾನುವಾರ ಹೀಗೆಯೇ ಭೀಕರ ರಾತ್ರಿ. ತಂದೆಯು ಸಂಗಡ ರೂಮಿನಲ್ಲಿ ಹೀಗೆಯೇ ಈಸಿಛೇರಿನಮೇಲೆ ಕುಳಿತಿದ್ದನು. ದುಃಖವು ಉಮ್ಮಳಿಸಿ ಬಂತು. ಕಣ್ಣು ಮುಚ್ಚಿಕೊಂಡು ಒರಗಿದನು.

ಂ ಂ ಂ ಂ

"ಕುಮಾರ . . . . ಕುಮಾರ!"

"ಕರೆದೆಯೇನಪ್ಪಾ"

"ಹುಂ. ಬಾರಣ್ಣ ಆಸ್ಪತ್ರೆಗೆ ಹೋಗಬೇಕು ಹೊತ್ತಾಗಿ ಹೋಯಿತು. ಸಾಯಂಕಾಲದಿಂದಲೂ ಆವಳನ್ನು ನೋಡಲಿಲ್ಲ."

"ಅಮ್ಮನ್ನ ನೋಡ್ಲೀಕೆ ನಾನೇ ಹೋಗುತ್ತೇನೆ ಆಗಬಹುದೇನಪ್ಪ?"

"ಬೇಡಣ್ಣ. ಬಹಳ ದೂರವಿಲ್ಲವೆ? ರಾತ್ರಿ. ನೀನು ಬಾಗಿಲು ಹಾಕಿಕೊಂಡು ಮಲಗಿರು. ನಾನು ಜಾಗ್ರತೆ ಬಂದುಬಿಡುತೀನಿ."

"ನಾನು ಬರ್ತೇನೆ ಆಗಬಹುದೇನಪ್ಪ"

"ಏಳು ಹಾಗಾದರೆ."

o o o o

"ಅಪ್ಪ ಅಮ್ಮನಿಗೆ ಈಗ ಹುಷಾರಾಗಿರಬಹುದು ಅಲ್ಲವೆ?"

"ನೋಡಪ್ಪ ನಾನು ವೆಂಕಟರಾಮುನ್ನ ಎತ್ತಿಕೊಳ್ಳದೆ ಎಷ್ಟು ದಿನವಾಯ್ತು. ಅವನು ಕಳ್ಳ! ನನ್ನ ಹತ್ತಿರ ಬರ್ತಿರ್ಲಿಲ್ಲ. ಅಮ್ಮನ ಹಿಂದೇ ಅಡಿಗಿಕೊಳ್ತಿದ್ದ ಅಲ್ವೇನಪ್ಪ?"

"..........."

"ಈಗ ಅಮ್ಮ ಇಲ್ವಲ್ಲಾ ಅಲ್ಲಿ ಅವನು ಯಾರ ಹತ್ತಿರ ಇರ್ತಾನೆ? ಅಳ್ತಾನೊ ಏನೊ ' ಹುಂ ನಾಳೇನೆ ಅಮ್ಮನ್ನ ಕೆಳದೀಗೆ ಕರೆದುಕೊಂಡು ಹೋಗೋಣವಪ್ಪ. ಬೇಡಪ್ಪ ಈ ಬೆಂಗ್ಳೂರು."

"ಆಗಲಣ್ಣ ಅವಳಿಗೆ ಗುಣವಾದ ಕೂಡಲೇ ಹೊರಟುಬಿಡೋಣ."

o o o o

"ಅಪ್ಪ ಆಸ್ಪತ್ರೆ ಕಾಣ್ತಿದೆ ನೋಡು. ಅಮ್ಮನಿಗೆ ನಿದ್ದೆ ಬಂದಿದೆಯೋ ಏನೋ ಯಾತಕೆ ಎಬ್ಬಿಸಬೇಕು.... ಏನಪ್ಪ ವೆಂಕಟರಾಮುನ್ನ ಏಕೆ ಕರೆದುಕೊಂಡು ಬರ್ಲಿಲ್ಲ ಅಂದರೆ ಏನು ಹೇಳ್ಬೇಕು"

"ಅಣ್ಣ ನೀನು ಬಹಳ ಮಾತನಾಡುತೀಯಪ್ಪ."

o o o o

"ಅಣ್ಣ ನೀನಿಲ್ಲೇ ಕುಳ್ತಿರು. ಅವಳನ್ನ ಬೇರೆ ಕೋಣೇಲಿ ಮಲಗಿಸಿದರಂತೆ ನೋಡಿಕೊಂಡು ಬರ್ತೀನಿ."

"ಇಲ್ಲಿ ಮೆಟ್ಟಿಲ ಮೇಲೇ ಕುಳಿತುಕೊಂಡಿರುತ್ತೇನೆ. ದೀಪ ಸಾಲಾಗಿ ಕಾಣ್ತದೆ."

o o o

"ಬಾ ಮಗೂ, ಇಲ್ಲಿ"

"ಡಾಕ್ಟ್ರೆ, ಅಪ್ಪ ಹೇಗಿದಾಳೆ"

"ಇಕೋ, ಕಿತ್ತಲೇ ಹಣ್ಣು"

"ಡಾಕ್ಟ್ರೆ, ಅಮ್ಮನಿಗೆ ಕಿತ್ತಲೆ ಹಣ್ಣು ಬೇಕಂತೆ! ಅವಳೀಗೆ ಕೊಡತೀನಿ"

"ನಿಮ್ಮ ಅಮ್ಮ ಇನ್ಮೇಲೆ ಕಿತ್ತಲೆ ಹಣ್ಣು ತಿನ್ನೋಲ್ಲಪ್ಪ"

೦ ೦ ೦ ೦

ಹೋಗಿ ಬರ್ತೀನಿ ಡಾಕ್ಟ್ರೆ. ಬೆಳಗ್ಗೆ ಬಂದು ಮುಂದಿನ ಕೆಲ್ಸ ತೀರಿಸ್ತೇನೆ.

"ಅಮ್ಮನಿಗೆ ಹೋಗಿ ಎಲ್ಲ ಹೇಳ್ತೀನಿ ಬಾರಣ್ಣ"

"ಯಾಕಪ್ಪ ಕಣ್ಣಲ್ಲಿ ನೀರ್ಬಂದಿದೆ?"

೦ ೦ ೦ ೦

"ಅಪ್ಪ ಅಳಬೇಡಪ್ಪ. ನಾಳೆ ಅಮ್ಮನಿಗೆ ನಾನೇ ಹೇಳ್ತೀನೆ. ನೀನು ಅತ್ತರೆ ನನಗೂ ಅಳು ಬರುತ್ತೆ . . . . . . . ಹುಂ . . . . . . ಏಕಪ್ಪ ಅಳೋದು . . . . ಕತ್ತಲು. ದೀಪ ಹಚ್ಚಪ್ಪ . . . ."

"ದೀಪ! ದೀಪ!! ಅಯ್ಯೊ ಮಗು! . . . . ಇನ್ನೆಲ್ಲಿಯ ದೀಪ . . . . ನಂದಿಹೋಯಿತು. ಮನೆಯ ನಂದಾದೀಪ ಆರಿ ಹೋಯಿತು. ಕತ್ತಲು! ಕತ್ತಲಣ್ಣ ಇನ್ನು ಜೀವನವೇ ಕತ್ತಲು. ಮನೆ ತುಂಬಾ ಕತ್ತಲು ಕತ್ತಲೂ . . . . . . ದೀಪ . . . ."

೦ ೦ ೦ ೦

ಕುಮಾರನು ಕಣ್ಣುಬಿಟ್ಟು ನೋಡಿದನು. ಅಂಗಿ ಕೂಡ ಕಣ್ಣೀರಿನಿಂದ ತೋಯ್ದು ಹೋಗಿದೆ. ತಾನು ಮೇಜಿನ ಮೇಲೆ ಹಚ್ಚಿಟ್ಟಿದ್ದ ದೀಪವೂ ಆರಿಹೋಗಿದೆ. ಸುತ್ತಲೂ ಕತ್ತಲು! ದೂರದಿಂದ ತುಂಗಭದ್ರೆಯ ಸಳಸಳ ನಿನಾದವು ಮಾತ್ರ, ಗಾಳಿ ಬೀಸಿದ ಶಬ್ದವನ್ನು ತೂರಿಕೊಂಡು ಬಂದು ಕೇಳುತ್ತಿದೆ!

. . . . . .